# ಡಾ.ಮಸೂದ್ ಇರಾನ್ ಅಧ್ಯಕ್ಷ: ಖಮೇನಿ ಘೋಷಣೆ

ಟೆಹರಾನ್ (ಎಪಿ): ಇರಾನ್‌ನ ಸಾರ್ವತ್ರಿಕ ಚುನಾವಣೆಯಲ್ಲಿ ಗೆಲುವು ಸಾಧಿಸಿದ ಸುಧಾರಣಾವಾದಿ ಡಾ.ಮಸೂದ್ ಪೆಜೆಶ್ಕಿಯಾನ್ ಅವರನ್ನು ದೇಶದ ನೂತನ ಅಧ್ಯಕ್ಷ ಎಂದು ಇರಾನ್‌ನ ಸರ್ವೋಚ್ಚ ನಾಯಕ ಅಯತುಲ್ಲಾ ಅಲಿ ಖಮೇನಿ ಅವರು ಭಾನುವಾರ ಅಧಿಕೃತವಾಗಿ ಘೋಷಿಸಿದರು.

ಮಂಗಳವಾರ ಪೆಜೆಶ್ಕಿಯಾನ್ ಪ್ರಮಾಣವಚನ ಸ್ವೀಕರಿಸಲಿದ್ದಾರೆ. ಘೋಷಣೆ ಬಳಿಕ ಮಾತನಾಡಿದ ಸರ್ವೋಚ್ಚ ನಾಯಕ ಖಮೇನಿ, 'ನಮ್ಮ ನೆರೆಯ ಆಫ್ರಿಕಾ ಖಂಡದ ದೇಶಗಳು ಹಾಗೂ ಏಷ್ಯಾದ ದೇಶಗಳಿಗೆ ಆದ್ಯತೆ ನೀಡಿ. ನಮಗೆ ಬೆಂಬಲ ಹಾಗೂ ಸಹಕಾರ ನೀಡಿದವರನ್ನೂ ಮರೆಯಬೇಡಿ' ಎಂದು ಸಲಹೆ ನೀಡಿದರು.

'ಜಿಯೊನಿಸ್ಟ್‌ಗಳ ಆಡಳಿತವು ಅತೀ ಕ್ರೂರವಾದ ಯುದ್ಧಾಪರಾಧದಲ್ಲಿ ತೊಡಗಿದೆ. ಕ್ರೌರ್ಯ ಹಾಗೂ ಹತ್ಯೆ ನಡೆಸುವುದರಲ್ಲಿ ಇಸ್ರೇಲ್ ಹೊಸ ದಾಖಲೆ ಬರೆಯುತ್ತಿದೆ' ಎಂದರು.



ಆಯತುಲ್ಲಾ ಅಲಿ ಖಮೇನಿ, ಡಾ.ಮಸೂದ್ ಪೆಜೆಶ್ಕಿಯಾನ್

'ರಚನಾತ್ಮಕವಾದ ಹಾಗೂ ಶಕ್ತಿಯುತವಾದ ವಿದೇಶಾಂಗ ನೀತಿ ಅಳವಡಿಸಿಕೊಳ್ಳಲಾಗುವುದು. ಎಲ್ಲರಿಗೂ ಸಮಾನವಾಗಿ ಕಾನೂನು ಅನ್ವಯಿಸುವಂತೆ ಮಾಡಲಾಗುವುದು. ಪರಿಸರ ರಕ್ಷಿಸುವ ನೀತಿಗಳನ್ನು ರೂಪಿಸಲಾಗುವುದು' ಎಂದು ಅಧ್ಯಕ್ಷ ಪೆಜೆಶ್ಕಿಯಾನ್ ಭರವಸೆ ನೀಡಿದರು.

ಉಪಾಧ್ಯಕ್ಷನನ್ನಾಗಿ 72 ವರ್ಷದ ಮೊಹಮ್ಮದ್ ರೆಜಾ ಆರಿಫ್ ಅವರನ್ನು ಪೆಜೆಶ್ಕಿಯಾನ್ ನೇಮಿಸಿದರು. ಆರಿಫ್ ಅವರು ಸ್ಟ್ಯಾಂಡ್‌ಫರ್ಡ್ ವಿಶ್ವವಿದ್ಯಾಲಯದಿಂದ ಎಂಜಿನಿಯರಿಂಗ್‌ನಲ್ಲಿ ಪಿಎಚ್.ಡಿ ಪಡೆದಿದ್ದಾರೆ.

ಬಿಳಿ ಚಿನ್ನ ಎಂದೇ ಕರೆಯಲ್ಪಡುವ ಲಿಥಿಯಂ ಕರ್ನಾಟಕದ ಯಾವ ಜಿಲ್ಲೆಯಲ್ಲಿ ಪತ್ತೆಯಾಗಿದೆ?

a) ಮೈಸೂರು
b) ಬೆಂಗಳೂರು
c) ಮಂಡ್ಯ
d) ಹುಬ್ಬಳ್ಳಿ

ಉತ್ತರ: c)

ಬಿಳಿ ಚಿನ್ನ ಎಂದೇ ಕರೆಯಲ್ಪಡುವ ಲಿಥಿಯಂ ನಿಕ್ಷೇಪಗಳು ಕರ್ನಾಟಕದ ಮಂಡ್ಯ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಪತ್ತೆಯಾಗಿದೆ. ಎರಡೂ ಜಿಲ್ಲೆಗಳಲ್ಲಿ 1600 ಟನ್ ಗಳಷ್ಟು ಲಿಥಿಯಂನ್ನು ಪರಮಾಣು ಶಕ್ತಿ ಇಲಾಖೆಯ ಘಟಕ ಮತ್ತು ಪರಮಾಣು ಖನಿಜಗಳು ಹಾಗೂ ಸಂಶೋಧನಾ ನಿರ್ದೇಶನಾಲಯವು ಈ ಸಂಪನ್ಮೂಲಗಳನ್ನು ಗುರುತಿಸಿದೆ. ಲಿಥಿಯಂ ನಿಕ್ಷೇಪ ಕರ್ನಾಟಕವಷ್ಟೇ ಅಲ್ಲದೆ, ಛತ್ತೀಸ್‌ಗಢದಲ್ಲೂ ಕಂಡು ಬಂದಿರುವುದಾಗಿ ಕೇಂದ್ರ ಭೂ ವಿಜ್ಞಾನ ಖಾತೆ ರಾಜ್ಯ ಸಚಿವ ಜಿತೇಂದ್ರ ಸಿಂಗ್ ಇತ್ತೀಚೆಗೆ ರಾಜ್ಯಸಭೆಗೆ ಮಾಹಿತಿ ನೀಡಿದ್ದಾರೆ. ದೇಶದ ಕೆಲ ರಾಜ್ಯಗಳಲ್ಲಿ ಲಿಥಿಯಂ ಪತ್ತೆಯಾಗಿರುವುದರಿಂದ ಈ ಖನಿಜದಲ್ಲಿ ಭಾರತ ಸ್ವಾವಲಂಬನೆ ಸಾಧಿಸಲು ಸಹಕಾರಿಯಾಗಿದ್ದು ವಿವರ ಇಲ್ಲಿದೆ.

## ಚೀನಾದಿಂದ ಕಡಿಮೆಯಾಗಲಿದೆ ಆಮದು

ಅಟಾಮಿಕ್ ಮಿನರಲ್ಸ್ ಡೈರೆಕ್ಟರೇಟ್ ಫಾರ್ ಎಕ್ಸ್‌ಪ್ಲೋರೇಶನ್ ಅಂಡ್ ರಿಸರ್ಚ್ (ಎಎಮ್‌ಡಿ) ಮಂಡ್ಯ ಜಿಲ್ಲೆಯಲ್ಲಿ 1,600 ಟನ್ ಲಿಥಿಯಂ ಸಂಪನ್ಮೂಲಗಳನ್ನು ಅನ್ವೇಷಿಸಿದೆ. ಲಿಥಿಯಂ ನಿಕ್ಷೇಪಗಳ ಆವಿಷ್ಕಾರದಿಂದಾಗಿ ಈ ಲೋಹದ ಮೇಲಿನ ಆಮದು ಅವಲಂಬನೆ ಕಡಿಮೆಯಾಗುತ್ತದೆ. ಪ್ರಸ್ತುತ ಭಾರತ ಮುಖ್ಯವಾಗಿ ಚೀನಾ ಮತ್ತು ಹಾಂಗ್ ಕಾಂಗ್ ಮೇಲೆ ಲಿಥಿಯಂಗಾಗಿ ಅವಲಂಬಿತವಾಗಿದೆ.

## ರಿಯಾಸಿಯಲ್ಲಿಯೂ ಪತ್ತೆ

ಈ ಹಿಂದೆ ಜಮ್ಮು -ಕಾಶ್ಮೀರದ ರಿಯಾಸಿಯಲ್ಲಿ ಲಿಥಿಯಂ ನಿಕ್ಷೇಪಗಳು ಪತ್ತೆಯಾಗಿದ್ದವು. ರಿಯಾಸಿಯ ಸಲಾಲ್ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳಲ್ಲಿ 50 ಲಕ್ಷ ಟನ್‌ಗಳಷ್ಟು ನಿಕ್ಷೇಪಗಳು ಕಂಡು ಬಂದಿದ್ದವು. ಈಗ ಕರ್ನಾಟಕ ಮತ್ತು ಛತ್ತೀಸ್‌ಗಢದಲ್ಲೂ ಬಿಳಿ ಚಿನ್ನದ ನಿಕ್ಷೇಪ ಪತ್ತೆಯಾಗಿರುವುದರಿಂದ ಈ ಲೋಹದ ಅವಲಂಬನೆ ಕಡಿಮೆಯಾದಂತಾಗಲಿದೆ. ಅದರಲ್ಲಿಯೂ ಭಾರತ ಚೀನಾದಿಂದ ಸುಮಾರು 70 ಪ್ರತಿಶತದಷ್ಟು ಲಿಥಿಯಂ ಅನ್ನು ಆಮದು ಮಾಡಿಕೊಳ್ಳುತ್ತದೆ. ಜತೆಗೆ ಲಿಥಿಯಂ ಜಾಗತಿಕ ಪೂರೈಕೆಯಲ್ಲಿ ಚೀನಾದ ಪಾಲು ಶೇ. 80 ರಷ್ಟಿದೆ.



## ಇಲ್ಲೆಲ್ಲ ನಿಕ್ಷೇಪಗಳಿವೆ

ಲಿಥಿಯಂ ನಿಕ್ಷೇಪ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರದೆ ಛತ್ತೀಸ್‌ಗಢದಲ್ಲೂ ಪತ್ತೆಯಾಗಿದೆ. ಈ ನಿಟ್ಟಿನಲ್ಲಿ ಛತ್ತೀಸ್‌ಗಢದ ಕೊರ್ಬಾ ಜಿಲ್ಲೆಯಲ್ಲೂ ಶೋಧ ನಡೆಯುತ್ತಿದೆ. ಸಚಿವ ಜಿತೇಂದ್ರ ಸಿಂಗ್ ಪ್ರಕಾರ, ಕೆಲವು ಖಾಸಗಿ ಕಂಪನಿಗಳು ತಮ್ಮ ವಶದಲ್ಲಿರುವ ಪ್ರದೇಶಗಳಲ್ಲಿ ರಿಯಾಕ್ಟರ್‌ಗಳನ್ನು ಸ್ಥಾಪಿಸಲು ಆಸಕ್ತಿ ವಹಿಸುತ್ತಿವೆ. ರಾಜಸ್ಥಾನ, ಬಿಹಾರ ಮತ್ತು ಆಂಧ್ರಪ್ರದೇಶದಲ್ಲಿ ಮೈಕಾ ಬೆಲ್ಟ್‌ಗಳಿವೆ, ಒಡಿಶಾ, ಛತ್ತೀಸ್‌ಗಢ ಮತ್ತು ಕರ್ನಾಟಕದಲ್ಲಿ ಲಿಥಿಯಂ ನಿಕ್ಷೇಪಗಳಿಗೆ ಅನ್ವೇಷಣೆ ನಡೆಯುತ್ತಿದೆ.

ಲಿಥಿಯಂ ನಿಕ್ಷೇಪಗಳಿರುವ ಪ್ರಮುಖ ರಾಷ್ಟ್ರಗಳು (ದಶಲಕ್ಷ ಟನ್‌ಗಳಲ್ಲಿ)

| ದೇಶ | ಮೌಲ್ಯ |
|---|---|
| ಭಾರತ | 5.9 |
| ಬೊಲಿವಿಯಾ | 23 |
| ಚೀನಾ | 6.8 |
| ಚಿಲಿ | 11 |
| ಅರ್ಜೆಂಟೀನಾ | 22 |
| ಆಸ್ಟ್ರೇಲಿಯಾ | 8.7 |

## ಯಾವುದಕ್ಕೆ ಉಪಯೋಗ?



- **ಬ್ಯಾಟರಿಗಳು:** ಮೊಬೈಲ್ ಫೋನ್‌ಗಳು, ಇವಿಗಳು ಇತ್ಯಾದಿಗಳ ಬ್ಯಾಟರಿಗಳಲ್ಲಿ ಅತ್ಯಗತ್ಯ. ಅದರಲ್ಲಿಯೂ ನಾನ್ ಚಾರ್ಜೇಬಲ್ ಬ್ಯಾಟರಿಗಳು ಮತ್ತು ಗಡಿಯಾರಗಳಿಗೆ ಪ್ರಮುಖವಾಗಿದೆ.
- **ಮಿಶ್ರಲೋಹಗಳು:** ಅಲ್ಯೂಮಿನಿಯಂ ಮತ್ತು ಮೆಗ್ನೀಷಿಯಂ ಸಾಮರ್ಥ್ಯ ಸುಧಾರಿಸಲು ಹಾಗೂ ತೂಕ ಕಡಿಮೆ ಮಾಡಲು ಮಿಶ್ರಲೋಹವಾಗಿ ಬಳಸಲಾಗುತ್ತದೆ. ಆ ಮೂಲಕ ವಿಮಾನ, ಬೈಸಿಕಲ್ ಫ್ರೇಮ್ ಮತ್ತು ಹೈಸ್ಪೀಡ್ ರೈಲುಗಳು ಇತ್ಯಾದಿಗಳಲ್ಲಿ ಬಳಸಲಾಗುತ್ತದೆ.
- **ಕೈಗಾರಿಕಾ ಬಳಕೆ:** ಹವಾನಿಯಂತ್ರಣ, ಕೈಗಾರಿಕಾ ಒಣಗಿಸುವ ವ್ಯವಸ್ಥೆಗಳು ಮತ್ತು ಗಾಜಿನ ಪಿಂಗಾಣಿಗಳಲ್ಲಿ ಬಳಸಲಾಗುತ್ತದೆ.

**1,600** ಟನ್
ಮಂಡ್ಯದಲ್ಲಿ ಪತ್ತೆಯಾಗಿರುವ ಲಿಥಿಯಂ ನಿಕ್ಷೇಪ

**50** ಲಕ್ಷ ಟನ್
ಜಮ್ಮು-ಕಾಶ್ಮೀರದಲ್ಲಿ ಪತ್ತೆ

# ಲಿಥಿಯಂನಲ್ಲಿ ಭಾರತ ಸ್ವಾವಲಂಬನೆ

## ಹೆಚ್ಚು ಬೇಡಿಕೆ ಖನಿಜ

1817ರಲ್ಲಿ ಮೊದಲ ಬಾರಿಗೆ ಪತ್ತೆಯಾದ ಲಿಥಿಯಂ ಜಾಗತಿಕವಾಗಿ ಹೆಚ್ಚು ಬೇಡಿಕೆಯಿರುವ ಖನಿಜವಾಗಿದೆ. ಇದು ಎಲ್ಲ ಲೋಹಗಳಿಗಿಂತ ಕಡಿಮೆ ಸಾಂದ್ರತೆಯುಳ್ಳದ್ದಾಗಿದ್ದು ನೀರಿನೊಂದಿಗೆ ಬೇಗನೆ ಪ್ರತಿಕ್ರಿಯಿಸುತ್ತದೆ.

**ಮಂಡ್ಯದಲ್ಲಿ ಬಿಳಿ ಚಿನ್ನ ಪತ್ತೆಯಾಗಿರುವ ಹಿನ್ನೆಲೆ ಈ ಖನಿಜಕ್ಕಾಗಿ ಚೀನಾ ಮೇಲೆ ತಗ್ಗಲಿದೆ ಅವಲಂಬನೆ**



## ಏನಿದು ಲಿಥಿಯಂ?

ಲಿಥಿಯಂ ಮೃದುವಾದ ಬಿಳಿ ವಿಷಕಾರಿ ಲೋಹವಾಗಿದ್ದು ಇತರ ಲೋಹಗಳಿಗೆ ಹೋಲಿಸಿದರೆ ಕಡಿಮೆ ಸಾಂದ್ರತೆ ಹೊಂದಿದೆ. ಇದನ್ನು ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ ತಿದ್ದುಪಡಿ) ಕಾಯ್ದೆ 2023 ರಲ್ಲಿ ನಿರ್ಣಾಯಕ ಮತ್ತು ಕಾರ್ಯತಂತ್ರದ ಖನಿಜಗಳು ಎಂದು ಗುರುತಿಸಲಾಗಿದೆ . ಹಸಿರು ಇಂಧನ ಮತ್ತು ಇಂಧನ ಸಂಗ್ರಹ ಅಗತ್ಯತೆಗಳಲ್ಲಿ ಸ್ವಾವಲಂಬನೆ ಸಾಧಿಸಲು ಸಹಕಾರಿಯಾಗುತ್ತದೆ. ವಾಹನಗಳು ಮತ್ತು ಆಟೋಮೊಬೈಲ್ ಉದ್ಯಮದಲ್ಲಿ ಲಿಥಿಯಂ ಅತ್ಯಗತ್ಯ ಬಳಕೆಯಾಗುವುದರಿಂದ ಎಲ್ಲಕ್ಕಿಂತ ಮುಖ್ಯವಾಗಿ ಕೈಗಾರಿಕಾ ಅಭಿವೃದ್ಧಿ ನಿರ್ಣಾಯಕ ಪಾತ್ರ ವಹಿಸುತ್ತದೆ.

**ಭಾರತದ ತ್ರಿವರ್ಣ ರಾಷ್ಟ್ರಧ್ವಜದ ಸೃಷ್ಟಿಕರ್ತ ಪಿಂಗಳಿ ವೆಂಕಯ್ಯ ಯಾವ ರಾಜ್ಯದವರು?**

a) ಆಂಧ್ರಪ್ರದೇಶ
b) ಕರ್ನಾಟಕ
c) ತಮಿಳುನಾಡು
d) ಕೇರಳ

**ಉತ್ತರ:- a)**



ಆಗಸ್ಟ್ 2

ವಿಕ ಈ ದಿನ ವಿಶೇಷ



## ಜನುಮ ದಿನ

## ಪಿಂಗಳಿ ವೆಂಕಯ್ಯ

- ಭಾರತದ ತ್ರಿವರ್ಣ ರಾಷ್ಟ್ರಧ್ವಜದ ಸೃಷ್ಟಿಕರ್ತ ಪಿಂಗಳಿ ವೆಂಕಯ್ಯ ಆಗಸ್ಟ್ 2, 1876ರಂದು ಆಂಧ್ರಪ್ರದೇಶದ ಭಟ್ಲಪೆನ್ನುಮಾರು ಎಂಬಲ್ಲಿ ಜನಿಸಿದರು. ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದ ವೆಂಕಯ್ಯನವರು ಭೂವಿಜ್ಞಾನಿಯಾಗಿ, ಪ್ರಾಧ್ಯಾಪಕರಾಗಿ ಅಲ್ಲದೆ ಶಿಕ್ಷಣತಜ್ಞರಾಗಿಯೂ ಸೇವೆ ಸಲ್ಲಿಸಿದ್ದಾರೆ. 19ನೇ ವಯಸ್ಸಿನಲ್ಲಿ ಬ್ರಿಟಿಷ್ ಸೇನೆಯಲ್ಲಿ ಸೈನಿಕರಾಗಿದ್ದ ವೆಂಕಯ್ಯನವರು ಬ್ರಿಟಿಷರ ಪರ ದಕ್ಷಿಣಆಫ್ರಿಕಾದಲ್ಲಿ ನಡೆದ ಯುದ್ಧದಲ್ಲಿಯೂ ಪಾಲ್ಗೊಂಡರು. ಅಲ್ಲಿ ಅವರಿಗೆ ರಾಷ್ಟ್ರಧ್ವಜದ ಮಹತ್ವ ಅರಿವಾಯಿತು. ಜುಲೈ 22, 1947ರಂದು ಅವರು ರೂಪಿಸಿದ ಭಾರತೀಯ ರಾಷ್ಟ್ರಧ್ವಜವನ್ನು ಮೊದಲ ಬಾರಿ ಅಂಗೀಕರಿಸಲಾಯಿತು. ಅವರು ಜುಲೈ 4, 1963ರಂದು ನಿಧನರಾದರು.

## ಸಶಸ್ತ್ರ ಪಡೆಗೆ ಪ್ರಥಮ ಮಹಿಳಾ ಮಹಾನಿರ್ದೇಶಕಿ ಯಾಗಿ ನೇಮಕಗೊಂಡವರು ಯಾರು?

a) ಸಕ್ಸೇನ ನಾಯರ್

b) ರಾಜೇಶ್ ಕುಮಾರ್

c) ಅನಿಲ್ ಶರ್ಮಾ

d) ಸಂಜಯ್ ಶುಕ್ಲಾ

**ಉತ್ತರ:– a)**

# ಸಶಸ್ತ್ರ ಪಡೆಗೆ ಪ್ರಥಮ ಮಹಿಳಾ ಮಹಾ ನಿರ್ದೇಶಕಿ

**ನವದೆಹಲಿ:** ಲೆಫ್ಟಿನೆಂಟ್ ಜನರಲ್ ಸಾಧನಾ ಸಕ್ಸೇನಾ ನಾಯರ್ ಅವರು ಸಶಸ್ತ್ರ ಪಡೆಗಳ ವೈದ್ಯಕೀಯ ಸೇವೆಗಳ ಮಹಾ ನಿರ್ದೇಶಕಿಯಾಗಿ ನೇಮಕಗೊಂಡಿದ್ದಾರೆ. ಈ ಸ್ಥಾನವನ್ನು ಅಲಂಕರಿಸಿದ ಪ್ರಥಮ ಮಹಿಳೆ ಎಂಬ ಖ್ಯಾತಿ ಸಾಧನಾ ಅವರದ್ದಾಗಿದೆ. ಸಶಸ್ತ್ರ ಪಡೆಗಳ ಆಸ್ಪತ್ರೆಗಳ ಸೇವೆಗಳ ಮಹಾ ನಿರ್ದೇಶಕರರಾಗಿ ಕಾರ್ಯನಿರ್ವಹಿಸಿದ ಮೊದಲ ಮಹಿಳೆ ಎನ್ನುವ ಖ್ಯಾತಿಯೂ ಅವರಿಗಿದೆ. ಅವರು ಪಶ್ಚಿಮ ಏರ್ ಕಮಾಂಡ್‌ನ ಪ್ರಧಾನ ವೈದ್ಯಕೀಯ ಅಧಿಕಾರಿಯಾದ ಪ್ರಥಮ ಮಹಿಳೆಯೂ ಆಗಿದ್ದಾರೆ.



**1985ರಲ್ಲಿ ಸೇರ್ಪಡೆ:** ಪುಣೆಯ ಸಶಸ್ತ್ರ ಪಡೆಗಳ ವೈದ್ಯಕೀಯ ಕಾಲೇಜ್‌ನ ಪದವೀಧರೆಯಾದ ಸಾಧನಾ, ಉತ್ತಮ ಶೈಕ್ಷಣಿಕ ದಾಖಲೆಯನ್ನು ಹೊಂದಿದ್ದಾರೆ. ಅವರು 1985ರ ಡಿಸೆಂಬರ್‌ನಲ್ಲಿ ಆರ್ಮಿ ಮೆಡಿಕಲ್ ಕೋರ್‌ಗೆ ಸೇರ್ಪಡೆಗೊಂಡಿದ್ದರು. ಕುಟುಂಬ ವೈದ್ಯಕೀಯದಲ್ಲಿ ಸ್ನಾತಕೋತ್ತರ ಪದವಿ ಹಾಗೂ ತಾಯಿ ಮತ್ತು ಮಕ್ಕಳ ಆರೋಗ್ಯದಲ್ಲಿ ಡಿಪ್ಲೊಮಾಗಳನ್ನು ಕೂಡ ಹೊಂದಿದ್ದಾರೆ. ನವದೆಹಲಿಯ ಅಖಿಲ ಭಾರತ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಅವರು ಎರಡು ವರ್ಷಗಳ ತರಬೇತಿ ಪೂರೈಸಿದ್ದಾರೆ.

## ಗಡಿ ಭದ್ರತಾ ಪಡೆಯ ಮುಖ್ಯಸ್ಥರಾಗಿ ಯಾರು ನೇಮಕಗೊಂಡಿದ್ದಾರೆ?

a) ದಲ್ಜಿತ್ ಸಿಂಗ್
b) ಅನಿಲ್ ಶರ್ಮಾ
c) ಸಂಜಯ್ ಶುಕ್ಲಾ
d) ಅಮಿತ್ ಪಟೇಲ್

**ಸರಿಯಾದ ಉತ್ತರ: a)**

# ಬಿಎಸ್‌ಎಫ್‌ಗೆ ದಲ್ಜಿತ್ ಸಿಂಗ್ ಚೌಧರಿ ಮುಖ್ಯಸ್ಥ

**ಹೊಸದಿಲ್ಲಿ:** ಗಡಿ ಭದ್ರತಾ ಪಡೆ (ಬಿಎಸ್‌ಎಫ್)ಯ ಮುಖ್ಯಸ್ಥರಾಗಿ ಉತ್ತರ ಪ್ರದೇಶ ಕೇಡರ್ ಐಪಿಎಸ್ ಅಧಿಕಾರಿ ದಲ್ಜಿತ್ ಸಿಂಗ್ ಚೌಧರಿಯನ್ನು ನೇಮಕ



ಮಾಡಿ ಕೇಂದ್ರ ಸರಕಾರ ಶನಿವಾರ ಆದೇಶ ಹೊರಡಿಸಿದೆ. ಜಮ್ಮು ಮತ್ತು ಕಾಶ್ಮೀರದಲ್ಲಿ ಇತ್ತೀಚೆಗೆ ಉಗ್ರ ಚಟುವಟಿಕೆ ಹೆಚ್ಚಿದ್ದ ಹಿನ್ನೆಲೆಯಲ್ಲಿ ಬಿಎಸ್‌ಎಫ್ ಮುಖ್ಯಸ್ಥ ಸ್ಥಾನದಿಂದ ನಿತಿನ್ ಅಗರ್ವಾಲ್ ಅವರನ್ನು ಶುಕ್ರವಾರ ಬಿಡುಗಡೆಗೊಳಿಸಿದ್ದ ಸರಕಾರ, 1990ರ ಬ್ಯಾಚ್ ಐಪಿಎಸ್ ಅಧಿಕಾರಿ ದಲ್ಜಿತ್ ಸಿಂಗ್ ಚೌಧರಿಯನ್ನು ಬಿಎಸ್‌ಎಫ್ ಮಹಾನಿರ್ದೇಶಕರಾಗಿ ನೇಮಕ ಮಾಡಿದೆ. ನೇಪಾಳ, ಭೂತಾನ್ ಗಡಿ ರಕ್ಷಣಾ ಪಡೆ ಸಶಸ್ತ್ರ ಸೀಮಾ ಬಲ (ಎಸ್‌ಎಸ್‌ಬಿ)ದ ಮಹಾನಿರ್ದೇಶಕರಾಗಿ ದಲ್ಜಿತ್ ಸಿಂಗ್ ಚೌಧರಿ ಅವರು ಕಾರ್ಯ ನಿರ್ವಹಿಸುತ್ತಿದ್ದರು.

ಕಾಶ್ಮೀರದ ಗಡಿಯಲ್ಲಿ ಹೆಚ್ಚುತ್ತಿರುವ ಉಗ್ರ ಚಟುವಟಿಕೆ ಹತ್ತಿಕ್ಕುವ ಜತೆಗೆ ಉಗ್ರರ ಒಳನುಸುಳುವಿಕೆ ತಡೆಯಲು ಕೇಂದ್ರ ಸರಕಾರ ಮುಂದಾಗಿದೆ. ಯೋಜನೆಯ ಭಾಗವಾಗಿ ಬಿಎಸ್‌ಎಫ್‌ನಲ್ಲಿ ಪ್ರಮುಖ ಬದಲಾವಣೆ ಮಾಡಲಾಗಿದೆ.

**ಭಾರತವು ಜಾಗತಿಕವಾಗಿ ಕೃಷಿ ಉತ್ಪನ್ನಗಳಲ್ಲಿ ಎಷ್ಟನೇ ರಫ್ತುದಾರ ನಾಗಿ ಹೊರಹೊಮ್ಮಿದೆ?**

a) 7
b) 8
c) 9
d) 10

**ಉತ್ತರ: b)**

# ಭಾರತ ಕೃಷಿ ಉತ್ಪನ್ನಗಳ ಎಂಟನೇ ರಫ್ತುದಾರ



ಭಾರತವು ಜಾಗತಿಕವಾಗಿ ಕೃಷಿ ಉತ್ಪನ್ನಗಳ ಎಂಟನೇ ಅತಿದೊಡ್ಡ ರಫ್ತುದಾರನಾಗಿ ಹೊರಹೊಮ್ಮಿದೆ. 2022ರಲ್ಲಿ 55 ಬಿಲಿಯನ್ ಡಾಲರ್ ಇದ್ದ ದೇಶದ ಕೃಷಿ ರಫ್ತು 2023ರ ವೇಳೆಗೆ 51 ಬಿಲಿಯನ್ ಡಾಲರ್‌ಗೆ ಇಳಿದಿದೆ. ಇದು ಜಾಗತಿಕವಾಗಿ ಕುಸಿತ ಕಂಡಿರುವುದರಿಂದ ದೇಶವು ಹಿಂದಿನ ವರ್ಷದಂತೆಯೇ 8ನೇ ಸ್ಥಾನದಲ್ಲಿ ಮುಂದುವರಿದಿದೆ ಎಂದು 'ವಿಶ್ವ ವ್ಯಾಪಾರ ಸಂಸ್ಥೆ'(ಡಬ್ಲ್ಯುಟಿಒ) ಬಿಡುಗಡೆ ಮಾಡಿರುವ ವರದಿಯಲ್ಲಿ ತಿಳಿಸಿದೆ.

ಕೃಷಿ ಸಾಮಗ್ರಿಗಳನ್ನು ರಫ್ತು ಮಾಡುವ ಅಗ್ರ ಹತ್ತು ರಾಷ್ಟ್ರಗಳ ಪೈಕಿ ಕೇವಲ ಮೂರು ದೇಶಗಳು ಮಾತ್ರ ಹಿಂದಿನ ವರ್ಷಕ್ಕಿಂತ ಈ ವರ್ಷ ಬೆಳವಣಿಗೆ ಸಾಧಿಸಿವೆ. ಅವುಗಳೆಂದರೆ ಯೂರೋಪಿಯನ್ ಯೂನಿಯನ್ (ಇಯು) ರಫ್ತಿನ ಪ್ರಮಾಣ ಶೇ.5ರಷ್ಟು, ಬ್ರೆಜಿಲ್ ಶೇ.6ರಷ್ಟು, ಥೈಲ್ಯಾಂಡ್ ಶೇ.2ರಷ್ಟು ಬೆಳವಣಿಗೆ ಸಾಧಿಸಿವೆ. ನಂತರದ ಸ್ಥಾನದಲ್ಲಿ ಚೀನಾ, ಕೆನಡಾ, ಮೆಕ್ಸಿಕೊ, ಭಾರತ, ಇಂಡೋನೇಷಿಯಾ, ಆಸ್ಟ್ರೇಲಿಯಾ ರಾಷ್ಟ್ರಗಳಿವೆ.

ರಷ್ಯಾ-ಉಕ್ರೇನ್ ಯುದ್ಧ, ಇರಾನ್- ಇರಾಕ್ ಸಂಘರ್ಷ, ರಫ್ತು ನಿಷೇಧ, ಕೆಂಪು ಸಮುದ್ರದ ಬಿಕ್ಕಟ್ಟು ಸೇರಿ ಇನ್ನಿತರ ಅಂಶಗಳು ಭಾರತದ ರಫ್ತಿನ ಮೇಲೆ ಗಣನೀಯ ಪರಿಣಾಮ ಬೀರಿವೆ ಎಂದು ವರದಿ ತಿಳಿಸಿದೆ.

## ಯುನೆಸ್ಕೋದ ವಿಶ್ವ ಪರಂಪರೆ ಗಳ ಪಟ್ಟಿಗೆ ಜಗತ್ತಿನ ಎಷ್ಟು ಸ್ಥಳಗಳನ್ನು ಸೇರ್ಪಡೆ ಮಾಡಲಾಗಿದೆ?

a) 10
b) 15
c) 20
d) 25

**ಉತ್ತರ: b)**

# ಯುನೆಸ್ಕೊ ವಿಶ್ವಪರಂಪರೆ ಪಟ್ಟಿಗೆ ಜಗತ್ತಿನ 15 ಸ್ಥಳಗಳ ಸೇರ್ಪಡೆ

ವಿಕ ಪ್ರಚಲಿತ

ಪ್ರಸಕ್ತ ವರ್ಷದಲ್ಲಿ ಈವರೆಗೆ ಯುನೆಸ್ಕೊ ವಿಶ್ವಪರಂಪರೆ ಪಟ್ಟಿಗೆ 15 ಐತಿಹಾಸಿಕ ಸ್ಥಳಗಳನ್ನು ಸೇರಿಸಲಾಗಿದೆ. ಪ್ರಪಂಚದಾದ್ಯಂತ ಇರುವ ಸಾಂಸ್ಕೃತಿಕ, ಐತಿಹಾಸಿಕ ಹಾಗೂ ನೈಸರ್ಗಿಕ ಸೌಂದರ್ಯ ಹೊಂದಿರುವ ಸ್ಥಳಗಳು ಇವಾಗಿವೆ. ಮಾತ್ರವಲ್ಲ, ಪ್ರಾಚೀನ ನಗರ ಕೇಂದ್ರಗಳಿಂದ ನೈಸರ್ಗಿಕ ಅದ್ಭುತಗಳವರೆಗೆ ಈ ತಾಣಗಳು ವಿಭಿನ್ನ ವೈಶಿಷ್ಟ್ಯಗಳನ್ನು ಹೊಂದಿದೆ.



**1 ಮೈದಾಮ್ (ಭಾರತ):** ಅಹೋಂ ರಾಜಮನೆತನದ ದಿಬ್ಬದ ಸಮಾಧಿ ವ್ಯವಸ್ಥೆ ಹೊಂದಿರುವ ಅಸ್ಸಾಂನ ಮೈದಾಮ್, ಈ ವರ್ಷ ಯುನೆಸ್ಕೊದ ವಿಶ್ವಪಾರಂಪರಿಕ ತಾಣಗಳಲ್ಲಿ ಸ್ಥಾನ ಪಡೆದಿದೆ. ಇದು ಅಹೋಂ ರಾಜವಂಶದ ವಿಶಿಷ್ಟ ಅಂತ್ಯಕ್ರಿಯೆ ಆಚರಣೆಗಳನ್ನು ಪ್ರತಿಬಿಂಬಿಸುತ್ತದೆ.



**2 ಕೆನೊಜೆರಾ ಸರೋವರ (ರಷ್ಯಾ)** ಸಾಂಪ್ರದಾಯಿಕ ಮರದ ವಾಸ್ತುಶಿಲ್ಪ ಮತ್ತು ಕೃಷಿ ಪದ್ಧತಿಗಳನ್ನು ಪ್ರದರ್ಶಿಸುವ ಅದ್ಭುತ ತಾಣವಾಗಿದೆ.



**3 ಮೆಲ್ಕಾ ಕುಂಟುರೆ ಮತ್ತು ಬಾಲ್ಚಿಟ್ (ಇಥಿಯೋಪಿಯಾ):** ಇಥಿಯೋಪಿಯಾದಾದ್ಯಂತ ಇರುವ ಪುರಾತತ್ವ ಮತ್ತು ಪ್ಯಾಲಿಯೊಂಟೊಲಾಜಿಕಲ್ ತಾಣಗಳು ಮಾನವನ ಆರಂಭಿಕ ವಸತಿ ಮತ್ತು ಇತಿಹಾಸಪೂರ್ವ ಸಂಸ್ಕೃತಿಗಳನ್ನು ಅರ್ಥೈಸಿಕೊಳ್ಳಲು ನೆರವಾಗುತ್ತವೆ. ಮೆಲ್ಕಾ ಕುಂತುರೆ ಮತ್ತು ಬಾಲ್ಚಿತ್‌ನ ಪುರಾತತ್ವ ಶಾಸ್ತ್ರ ಹಾಗೂ ಪ್ರಾಗ್ಜೀವಶಾಸ್ತ್ರದ ಪುರಾವೆಗಳು ಅನಾದಿ ಕಾಲದ ಮನುಷ್ಯನ ಜೀವನವನ್ನು ಅನಾವರಣಗೊಳಿಸುತ್ತವೆ.



**4 ಹೆಗ್ಮಾತನೆಹ್ (ಇರಾನ್):** ಹಮದಾನ್‌ನಲ್ಲಿರುವ ಹೆಗ್ಮಾತನೇಹ್ ಪ್ರಾಚೀನ ಪ್ರಪಂಚದ ಪ್ರಮುಖ ನಗರಗಳಲ್ಲಿ ಒಂದಾಗಿದೆ. ಪುರಾತತ್ವ ಶಾಸ್ತ್ರದ ಅವಶೇಷಗಳು ಇಲ್ಲಿವೆ.



**5 ಫು ಪ್ರಭಾತ್ (ಥೈಲ್ಯಾಂಡ್):** ಫು ಪ್ರಭಾತ್, ಪ್ರಾಚೀನ ಕಲ್ಲಿನ ಕೆತ್ತನೆಗಳು ಮತ್ತು ಶಾಸನಗಳಿಗೆ ಹೆಸರುವಾಸಿಯಾಗಿದೆ. ಇವು ದ್ವಾರಾವತಿಯ ಅವಧಿಗೆ ಸೇರಿವೆ. ಇದು ಥಾಯ್ ನಾಗರಿಕತೆ ಮತ್ತು ಧಾರ್ಮಿಕ ಆಚರಣೆಗಳ ಮಹತ್ವದ ಅಂಶಗಳನ್ನು ವಿವರಿಸುತ್ತದೆ.



**6 ಸಂತ ಹಿಲೇರಿಯನ್ (ಪ್ಯಾಲೆಸ್ತೀನ್):** ಈ ತಾಣವು ಪುರಾತನ ಸಂತ ಹಿಲೇರಿಯನ್ ಮಠವನ್ನು ಟೆಲ್ ಉಮ್ ಅಮೆರ್‌ನ ಪುರಾತತ್ವ ಅವಶೇಷಗಳೊಂದಿಗೆ ಸಂಯೋಜಿಸುತ್ತದೆ. ಇದು ಕ್ರಿಶ್ಚಿಯನ್ ಸಮುದಾಯದ ಸನ್ಯಾಸತ್ವ ಮತ್ತು ಪುರಾತನ ನಗರಾಭಿವೃದ್ಧಿಯನ್ನು ಸೂಚಿಸುತ್ತದೆ.



**7 ವಯಾ ಅಪ್ಪಿಯಾ ರೆಜಿನಾ ವೈರಮ್ (ಇಟಲಿ):** 'ರಸ್ತೆಗಳ ರಾಣಿ' ಎಂದು ಕರೆಯಲ್ಪಡುವ ವಯಾ ಅಪ್ಪಿಯಾ ಪ್ರಾಚೀನ ರೋಮ್‌ನ ಅತ್ಯಂತ ಹಳೆಯ ರಸ್ತೆಗಳಲ್ಲಿ ಒಂದು. ರೋಮನ್ ಸಾಮ್ರಾಜ್ಯದ ವಿಸ್ತರಣೆ ಮತ್ತು ಆಡಳಿತದಲ್ಲಿ ಈ ಮಾರ್ಗ ನಿರ್ಣಾಯಕ.



**8 ಬದೈನ್ ಜರನ್ ಡೆಸರ್ಟ್- ಮರಳು ಮತ್ತು ಸರೋವರಗಳ ಗೋಪುರ (ಚೀನಾ):** ಈ ಮರುಭೂಮಿಯು ಮರಳು ದಿಬ್ಬ ಮತ್ತು ಸರೋವರಗಳಿಗೆ ಹೆಸರುವಾಸಿ. ವಿಶಿಷ್ಟ ರಚನೆಯ ಮರಳು ದಿಬ್ಬದ ರಚನೆಗಳು ಮತ್ತು ಅಲ್ಪಕಾಲಿಕ ಸರೋವರಗಳನ್ನು ಹೊಂದಿದೆ.



**9 ಉಮ್- ಅಲ್- ಜಿಮಾಲ್ (ಜೋರ್ಡಾನ್) :** ಉತ್ತರ ಜೋರ್ಡಾನ್‌ನಲ್ಲಿರುವ ಉಮ್ ಅಲ್-ಜಿಮಾಲ್ ಪ್ರಾಚೀನ ಮರುಭೂಮಿ ಪಟ್ಟಣಗಳ ಸುಸ್ಥಿತಿಯಲ್ಲಿರುವ ಅವಶೇಷಗಳಿಗೆ ಹೆಸರುವಾಸಿ.



**10 ಗೆಡಿ ಐತಿಹಾಸಿಕ ಪಟ್ಟಣ ಮತ್ತು ಪುರಾತತ್ವ ತಾಣ (ಕೀನ್ಯಾ):** ಮಧ್ಯಕಾಲೀನ ಅವಧಿಯಲ್ಲಿದ್ದ ವ್ಯಾಪಾರ ಮತ್ತು ಸಾಂಸ್ಕೃತಿಕ ವಿನಿಮಯದ ಒಳನೋಟಗಳನ್ನು ಒದಗಿಸುತ್ತದೆ. ಸ್ವಾಹಿಲಿ ನಾಗರಿಕತೆಯನ್ನು ಅರಿಯಲು ನೆರವಾಗುತ್ತದೆ.



**11 ಪ್ಲೈಸ್ಟೋಸೀನ್ (ದಕ್ಷಿಣ ಆಫ್ರಿಕಾ):** ಆಧುನಿಕ ಮಾನವ ನಡವಳಿಕೆಯ ವಿಕಾಸವನ್ನು ಅರ್ಥ ಮಾಡಿಕೊಳ್ಳಲು ದಕ್ಷಿಣ ಆಫ್ರಿಕಾದ ಈ ಪ್ಲೈಸ್ಟೋಸೀನ್ ತಾಣಗಳು ಸಹಾಯ ಮಾಡುತ್ತವೆ. ಇವು ಮಾನವನ ಆರಂಭಿಕ ಆವಿಷ್ಕಾರ, ಕಲೆ ಮತ್ತು ಸಾಮಾಜಿಕ ಅಭ್ಯಾಸಗಳ ಗಮನಾರ್ಹ ಪುರಾವೆಗಳನ್ನು ನೀಡುತ್ತವೆ.



**12 ಶ್ವೆರಿನ್ ರೆಸಿಡೆನ್ಸ್ ಎನ್ಸೆಂಬಲ್ (ಜರ್ಮನಿ):** ಉತ್ತರ ಯೂರೋಪಿಯನ್ ನವೋದಯದ ವಾಸ್ತುಶಿಲ್ಪ ಶೈಲಿಯನ್ನು ಪ್ರತಿನಿಧಿಸುತ್ತದೆ. ಈ ತಾಣವು ಪ್ರಾದೇಶಿಕ ಸಂಸ್ಕೃತಿ ಮತ್ತು ಐತಿಹಾಸಿಕ ಶ್ರೀಮಂತಿಕೆಯನ್ನು ಪ್ರತಿಬಿಂಬಿಸುತ್ತದೆ.



**13 ಸಾಡೋ ಐಲ್ಯಾಂಡ್ ಗೋಲ್ಡ್ ಮೈನ್ಸ್ (ಜಪಾನ್):** ಇದು ಐತಿಹಾಸಿಕ ಗಣಿಗಾರಿಕೆ ತಾಣಗಳಾಗಿವೆ. ಗಣಿಗಾರಿಕೆಯು ಎಡೋ ಅವಧಿಯಲ್ಲಿ ಜಪಾನ್‌ನ ಆರ್ಥಿಕತೆ ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಗಣಿಗಾರಿಕೆಯ ಸುರಂಗಗಳು, ಸಂಬಂಧಿತ ಮೂಲಸೌಕರ್ಯಗಳನ್ನು ಇದು ಒಳಗೊಂಡಿದೆ. ಐತಿಹಾಸಿಕ ಚಿನ್ನದ ಗಣಿಗಾರಿಕೆಯು ತಾಂತ್ರಿಕ ಮತ್ತು ಸಾಮಾಜಿಕ ಅಂಶಗಳನ್ನು ವಿವರಿಸುತ್ತದೆ.



**14 ರಾಯಲ್ ಕೋರ್ಟ್ ಆಫ್ ಟಿಬೆಲೆ (ಬುರ್ಕಿನಾ ಫಾಸೊ):** ಕಲಾತ್ಮಕ ಮತ್ತು ಸಾಂಸ್ಕೃತಿಕ ಸಂಪ್ರದಾಯಗಳನ್ನು ಪ್ರತಿನಿಧಿಸುವ ಅಲಂಕೃತ ಕಟ್ಟಡಗಳನ್ನು ಟೈಬೆಲೆ ರಾಯಲ್ ಕೋರ್ಟ್ ಹೊಂದಿದೆ. ವಿಸ್ತಾರವಾದ ವಿನ್ಯಾಸಗಳು ಶ್ರೀಮಂತ ರಾಜಮನೆತನದ ಪರಂಪರೆ ಮತ್ತು ವಾಸ್ತುಶಿಲ್ಪದ ಶೈಲಿಯನ್ನು ಪ್ರತಿಬಿಂಬಿಸುತ್ತದೆ.



**15 ನೆಲ್ಸನ್ ಮಂಡೇಲಾ ಲೆಗಸಿ ಪಾರಂಪರಿಕ ತಾಣ (ದಕ್ಷಿಣ ಆಫ್ರಿಕಾ)** ಮಾನವ ಹಕ್ಕುಗಳು, ವಿಮೋಚನೆ ಮತ್ತು ಸಮನ್ವಯದಲ್ಲಿ ನೆಲ್ಸನ್ ಮಂಡೇಲಾ ಅವರ ಪಾತ್ರವನ್ನು ಅರಿಯಲು ಈ ತಾಣ ನೆರವಾಗುತ್ತದೆ.

ಎಕನಾಮಿಕ್ಸ್ ಇಂಟಲಿಜೆಂಟ್ ಯೂನಿಟ್ ಜಗತ್ತಿನ ವಾಸಯೋಗ್ಯ ನಗರಗಳ ಪಟ್ಟಿಯನ್ನು ಬಿಡುಗಡೆ ಮಾಡಿದ್ದು ಯಾವುದು ಅಗ್ರಸ್ಥಾನ ಪಡೆದುಕೊಂಡಿದೆ?

a) ಮೆಲ್ಬೋರ್ನ್
b) ಪ್ಯಾರಿಸ್
c) ವಿಯೆನ್ನಾ
d) ಕ್ಯಾಲ್ಗರಿ

ಉತ್ತರ: c)

2) 'ಎಕನಾಮಿಸ್ಟ್ ಇಂಟೆಲಿಜೆನ್ಸ್ ಯೂನಿಟ್' ಜಗತ್ತಿನ ವಾಸಯೋಗ್ಯ ನಗರಗಳ ಪಟ್ಟಿಯನ್ನು ಬಿಡುಗಡೆ ಮಾಡಿದ್ದು, ಯಾವುದು ಅಗ್ರಸ್ಥಾನ ಪಡೆದುಕೊಂಡಿದೆ?

ಎ) ಮೆಲ್ಬೋರ್ನ್ ಬಿ) ಪ್ಯಾರಿಸ್

ಸಿ) ವಿಯೆನ್ನಾ ಡಿ) ಕ್ಯಾಲ್ಗರಿ

ಉತ್ತರ: ಸಿ) ವಿಯೆನ್ನಾ

- ವಿವರಣೆ: ಜಗತ್ತಿನ ವಾಸಯೋಗ್ಯ ನಗರಗಳ ಪಟ್ಟಿಯನ್ನು 'ಎಕನಾಮಿಸ್ಟ್ ಇಂಟಲಿಜೆನ್ಸ್ ಯೂನಿಟ್' ಬಿಡುಗಡೆ ಮಾಡಿದ್ದು, ಆಸ್ಟ್ರಿಯಾದ ರಾಜಧಾನಿ ಸತತ ಮೂರನೆಯ ಬಾರಿ ಮೊದಲ ಸ್ಥಾನ ಪಡೆದುಕೊಂಡಿದೆ. ಜಾಗತಿಕ ಸೂಚ್ಯಂಕದಲ್ಲಿ ವಿಯೆನ್ನಾ 98.4 ಅಂಕಗಳಿಸಿದೆ.
- ಡೆನ್ಮಾರ್ಕ್‌ನ ರಾಜಧಾನಿ ಕೊಪನ್‌ಹೇಗನ್ ಎರಡನೆಯ ಸ್ಥಾನ ತನ್ನದಾಗಿಸಿಕೊಂಡಿದೆ. ಪರಿಸರಸ್ನೇಹಿ ಜೀವನ ವಿಧಾನಕ್ಕೆ ಕೊಪನ್ ಹೇಗನ್ ಹೆಸರುವಾಸಿಯಾಗಿದೆ. ಸ್ವಿಟ್ಜರ್‌ಲ್ಯಾಂಡಿನ ಜ್ಯೂರಿಚ್ ನಗರ ಮೂರನೆಯ ಸ್ಥಾನದಲ್ಲಿದೆ.
- ಆಸ್ಟ್ರೇಲಿಯಾದ ಮೆಲ್ಬೋರ್ನ್ ನಾಲ್ಕನೆಯ ಸ್ಥಾನದಲ್ಲಿ ಮತ್ತು ಕೆನಡಾದ ಅಲ್ಬರ್ಟಾ ಪ್ರಾಂತ್ಯದ ಕ್ಯಾಲ್ಗರಿ ಐದನೆಯ ಸ್ಥಾನದಲ್ಲಿ ಗುರುತಿಸಲ್ಪಟ್ಟಿವೆ. ಆರೋಗ್ಯ ಸೇವೆಗಳು, ಶಿಕ್ಷಣ, ಸಂಸ್ಕೃತಿ ಮತ್ತು ಪರಿಸರ, ಮೂಲಸೌಕರ್ಯಗಳು ಇವು ರ್‍ಯಾಂಕಿಂಗ್‌ನ ಮಾನದಂಡಗಳು.

**ವಾಯುಮಂಡಲದ ಯಾವ ಪದರಿನಲ್ಲಿ ಜಲಜನಕ ಮತ್ತು ಹೀಲಿಯಂ ಕಂಡುಬರುತ್ತದೆ?**

a) ಪರಿವರ್ತನಾ ಮಂಡಲ

b) ಸಮೋಷ್ಣ ಮಂಡಲ

c) ಉಷ್ಣ ಮಂಡಲ

d) ಬಾಹ್ಯ ಮಂಡಲ

**ಉತ್ತರ: d)**

ವಾಯುಮಂಡಲದಲ್ಲಿನ ಅನಿಲಗಳು

- ಸಾರಜನಕ (Nitrogen) – **78.08%**
- ಆಮ್ಲಜನಕ (Oxygen) – **21%**
- ಆರ್ಗಾನ್ (Argon) – **0.93%**
- ಕಾರ್ಬನ್ ಡೈ ಆಕ್ಸೈಡ್ – **0.03%**
- ನಿಯಾನ್ – **0.002%**, ಓಝೋನ್, ಹೀಲಿಯಂ ಇತ್ಯಾದಿ

## ವಾಯುಮಂಡಲದ ವಿವಿಧ ಪದರುಗಳು

| | |
|---|---|
| ಪರಿವರ್ತನ ಮಂಡಲ (Troposphere) 0-16 ಕಿ.ಮೀ | * ಅತ್ಯಂತ ಕೆಳಪದರ/ ಭೂಮಿಗೆ ಹತ್ತಿರವಿದೆ. **ಹವಾಮಾನದ ಬದಲಾವಣೆ** ಕಂಡು ಬರುತ್ತದೆ. (**ಮೋಡ, ಮಾರುತ, ಮಿಂಚು, ಗುಡುಗು** ಇತ್ಯಾದಿ).<br>* **ವಿಮಾನಗಳು ಹಾರಾಟಕ್ಕೆ** ಸೂಕ್ತ. ಎತ್ತರಕ್ಕೆ ಹೋದಂತೆ **ಪ್ರತೀ 165 ಮೀ ಗೆ $1^0$ C** ಹಾಗೂ **1000** ಮೀಗೆ **$6.4^0$ C ಉಷ್ಣಾಂಶ** ಕಡಿಮೆಯಾಗುತ್ತದೆ.<br>* ಇಲ್ಲಿ **ಸಂವಹನ** (Convection) ಅನ್ವಯ ಉಷ್ಣಶಕ್ತಿಯು ವರ್ಗಾವಣೆಯಾಗುತ್ತದೆ. (ಹೆಚ್ಚು) |
| ಸಮೋಷ್ಣ ಮಂಡಲ (Stratosphere) 16-50 ಕಿ.ಮೀ | * **ಓಝೋನ್** ಪದರು ಕಂಡು ಬರುತ್ತದೆ. * **ಮೋಡಗಳು** ಇರುವುದಿಲ್ಲ.<br>* **ಜೆಟ್ ವಿಮಾನಗಳ** ಹಾರಾಟಕ್ಕೆ ಸೂಕ್ತವಾಗಿದೆ.<br>* ಇಲ್ಲಿ **ವಾಹಕತೆ** (Conduction) ಅನ್ವಯ ಉಷ್ಣಶಕ್ತಿ ವರ್ಗಾವಣೆಯಾಗುತ್ತದೆ. |
| ಮಧ್ಯಂತರ ಮಂಡಲ (Mesosphere) 50-80 ಕಿ.ಮೀ | * **ಅತ್ಯಂತ ಶೀತ ವಲಯ.** * **ಉಲ್ಕೆಗಳು** ಸುಟ್ಟು ಬೂದಿಯಾಗುತ್ತವೆ.<br>* **ಮಧ್ಯಂತರ ವಿರಾಮ** (Mesospause) : ಇದು ಮಧ್ಯಂತರ ಮಂಡಲದ & ಅಯಾನು ಮಂಡಲ ಸಂಧಿಸುವ ಭಾಗ.<br>* ಇಲ್ಲಿ **ಸಂವಹನ** (Convection)ದ ಅನ್ವಯ ಉಷ್ಣಶಕ್ತಿಯು ವರ್ಗಾವಣೆಯಾಗುತ್ತದೆ. (ಕಡಿಮೆ) |
| ಉಷ್ಣ ಮಂಡಲ (Thermosphere/ Ionosphere) 80-400 ಕಿ.ಮೀ | * ಅತೀ ಹೆಚ್ಚು **ಉಷ್ಣಾಂಶ** (X-Ray ಕಿರಣಗಳ ಹೀರಿಕೆ & ಸೂಕ್ಷ್ಮ ತರಂಗ).<br>* ಇಲ್ಲಿ **ರೇಡಿಯೋ ಅಲೆಗಳು** ಅಪ್ಪಳಿಸಿ ಭೂಮಿಗೆ ವಾಪಸ್ಸಾಗುತ್ತವೆ.<br>* ರಡಾರ್ & ನಾವಿಕರ ಸಂಪರ್ಕಗಳಿಗೆ ಸಹಕಾರಿ.<br>* ಧೃವ ಜ್ಯೋತಿಗಳನ್ನು ಸೃಷ್ಟಿಸುತ್ತದೆ.<br>**ಅರೋರಾ ಬೊರಾಲಿಸ್** – ಉತ್ತರ ಗೋಳಾರ್ಧ<br>**ಅರೋರಾ ಅಸ್ಟ್ರಾಲಿಸ್** – ದಕ್ಷಿಣ ಗೋಳಾರ್ಧ |
| ಬಾಹ್ಯ ಮಂಡಲ (Exosphere) 400-1000 ಕಿ.ಮೀ | * ವಾಯುಮಂಡಲದ ಅತ್ಯಂತ ಎತ್ತರದ ಸ್ತರ. ಭೂಮಿಯ ಗುರುತ್ವ/ ಒತ್ತಡ ಕಡಿಮೆ.<br>* **"ವಾನ್ ಅಲೆನ್ ವಿಕಿರಣ ಪಟ್ಟಿ"** ಇದೆ. ಜಲಜನಕ & **ಹೀಲಿಯಂ** ಕಂಡು ಬರುತ್ತವೆ.<br>* ಇದರ ಮೇಲ್ಭಾಗದಲ್ಲಿ **ಕಾಂತತ್ವ ವಲಯ** (Magnetosphere) ಕಂಡು ಬರುತ್ತದೆ.<br>* ಕೃತಕ ಉಪಗ್ರಹಗಳು ನಿಲ್ಲಿಸುವ ವಲಯ. |

ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಟೆನಿಸ್ ನಲ್ಲಿ ಚಿನ್ನದ ಪದಕ ಗೆದ್ದ ತಾರೆ ಯಾರು?

a) ನವಾಜ್ ಜೋಕ್ ವಿಚ್
b) ಜಾನಿಕ್ ಸಿನ್ನರ್
c) ಕಾರ್ಲೋಸ್ ಅಲ್ಕಾರಾಸ್
d) ಸುಮಿತ್ ನಗಾಲ್

ಉತ್ತರ:- a)



# ಜೋಕೋಗೆ ಚೊಚ್ಚಲ ಒಲಿಂಪಿಕ್ಸ್ ಚಿನ್ನ

## ಫೈನಲ್‌ನಲ್ಲಿ ಆಲ್ಕರಜ್ ವಿರುದ್ಧ ಗೆಲುವು




ಟೆನಿಸ್ ಲೋಕದ ದಿಗ್ಗಜ ಆಟಗಾರ ನೋವಾಕ್ ಜೋಕೋವಿಚ್ ಅವರ ಚೊಚ್ಚಲ ಒಲಿಂಪಿಕ್ಸ್ ಚಿನ್ನದ ಪದಕದ ಕನಸು ಕೊನೆಗೂ ನನಸಾಗಿದೆ. ಭಾನುವಾರ ಪ್ಯಾರಿಸ್ ಕ್ರೀಡಾಕೂಟದ ಪುರುಷರ ಸಿಂಗಲ್ಸ್ ಫೈನಲ್‌ನಲ್ಲಿ ಯುವ ತಾರೆ ಕಾರ್ಲೋಸ್ ಆಲ್ಕರಜ್ ವಿರುದ್ಧ 37ರ ಜೋಕೋ 7–6(3), 7–6(2) ಸೆಟ್‌ಗಳಲ್ಲಿ ರೋಚಕ ಗೆಲುವು ಸಾಧಿಸಿದರು.

24 ಗ್ರ್ಯಾನ್‌ಸ್ಲಾಂ ಪ್ರಶಸ್ತಿಗಳ ಒಡೆಯ ಜೋಕೋವಿಚ್ 2008ರ ಒಲಿಂಪಿಕ್ಸ್‌ನಲ್ಲೇ ಕಂಚಿನ ಪದಕ ಗೆದ್ದಿದ್ದರು. 2008, 2012 ಹಾಗೂ 2020ರಲ್ಲಿ ಸೆಮಿಫೈನಲ್‌ನಲ್ಲಿ ಸೋತಿದ್ದ ಅವರು ಈ ಬಾರಿ ಚಿನ್ನ ಗೆದ್ದಿದ್ದಾರೆ. ಈ ಮೂಲಕ, ಒಲಿಂಪಿಕ್ಸ್ ಸಿಂಗಲ್ಸ್‌ನಲ್ಲಿ 1908ರ ಬಳಿಕ ಈ ಸಾಧನೆ ಮಾಡಿದ ಅತಿ ಹಿರಿಯ ಆಟಗಾರ ಎನಿಸಿಕೊಂಡಿದ್ದಾರೆ.

**ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಮಹಿಳೆಯರ 100 ಮೀಟರ್ ಓಟದಲ್ಲಿ ಚಿನ್ನದ ಪದಕ ಗೆದ್ದ ಜೂಲಿಯೆನ್ ಆಲ್ಫ್ರೆಡ್ ಯಾವ ದೇಶದವರು?**

a) ಅಮೆರಿಕ

b) ಆಫ್ರಿಕಾ

c) ಸೆಂಟ್ ಲೂಸಿಯಾ

d) ಫ್ರಾನ್ಸ್

**ಉತ್ತರ:- c)**

# ಜೂಲಿಯನ್ ಆಲ್ಫ್ರೆಡ್ ವೇಗದ ಓಟಗಾರ್ತಿ

## ಸೇಂಟ್ ಲೂಸಿಯಾಗೆ ಮೊದಲ ಚಿನ್ನ | ಅಮೆರಿಕದ ಫೇವರಿಟ್ ಶಾಕಾರಿ ರಜತ ಪದಕಕ್ಕೆ ತೃಪ್ತಿ

ಪ್ಯಾರಿಸ್: ಸೇಂಟ್ ಲೂಸಿಯಾದ 23 ವರ್ಷದ ಓಟಗಾರ್ತಿ ಜೂಲಿಯನ್ ಆಲ್ಫ್ರೆಡ್ ಎಲ್ಲರ ಲೆಕ್ಕಾಚಾರಗಳನ್ನು ಮೀರಿಸಿ ಮಹಿಳೆಯರ 100 ಮೀ. ಓಟದಲ್ಲಿ ಸ್ವರ್ಣ ಪದಕ ಜಯಿಸುವ ಮೂಲಕ ಪ್ಯಾರಿಸ್ ಒಲಿಂಪಿಕ್ಸ್‌ನ ಅತಿವೇಗದ ಓಟಗಾರ್ತಿ ಎನಿಸಿದ್ದಾರೆ. ಸ್ಪರ್ಧೆಯ ಫೇವರಿಟ್ ಎನಿಸಿದ್ದ ಅಮೆರಿಕದ ಶಾಕಾರಿ ರಿಚರ್ಡ್‌ಸನ್ ರಜತ ಪದಕಕ್ಕೆ ತೃಪ್ತಿಪಟ್ಟರೆ, ಅಮೆರಿಕದ ಮತ್ತೋರ್ವ ಓಟಗಾರ್ತಿ ಮೆಲಿಸ್ಸಾ ಜೆಫೆರ್‌ಸನ್ ಕಂಚಿನ ಪದಕ ಜಯಿಸಿದರು. 100 ಮೀ. ಓಟದಲ್ಲಿ ಸತತ 5ನೇ ಪದಕದ ನಿರೀಕ್ಷೆಯಲ್ಲಿದ್ದ ಜಮೈಕಾದ ಶೆಲ್ಲಿ-ಆ್ಯನ್ ಫ್ರೇಸರ್ ಪ್ರೈಸ್ ಗಾಯದಿಂದಾಗಿ ಸೆಮಿಫೈನಲ್‌ನಿಂದಲೇ ಹೊರಗುಳಿದರು.




ಸ್ಟೇಡ್ ಡಿ ಫ್ರಾನ್ಸ್‌ನಲ್ಲಿ ಶನಿವಾರ ರಾತ್ರಿ ನಡೆದ ಸ್ಪರ್ಧೆಯಲ್ಲಿ ಜೂಲಿಯನ್ 10.72 ಸೆಕೆಂಡ್‌ಗಳಲ್ಲಿ ಓಡಿ ರಾಷ್ಟ್ರೀಯ ದಾಖಲೆ ಬರೆಯುವ ಮೂಲಕ ಚಿನ್ನದ ಪದಕಕ್ಕೆ ಕೊರಳೊಡ್ಡಿದರು. ಶಾಕಾರಿ 10.87 ಸೆಕೆಂಡ್ ಮತ್ತು ಮೆಲಿಸ್ಸಾ 10.92 ಸೆಕೆಂಡ್‌ಗಳಲ್ಲಿ ಓಟ ಮುಗಿಸಿದರು. ಬ್ರಿಟನ್‌ನ ನೀಟಾ ಡ್ಯಾರಿಲ್ (10.96 ಸೆ) 4ನೇ ಸ್ಥಾನಕ್ಕೆ ತೃಪ್ತಿಪಟ್ಟರು. 2 ಲಕ್ಷ ಜನಸಂಖ್ಯೆಯ ಕೆರಿಬಿಯನ್ ದ್ವೀಪರಾಷ್ಟ್ರ ಸೇಂಟ್ ಲೂಸಿಯಾಗೆ ಜೂಲಿಯನ್ ಮೊಟ್ಟಮೊದಲ ಒಲಿಂಪಿಕ್ಸ್ ಪದಕ ಗೆದ್ದುಕೊಟ್ಟರು. ಕಳೆದ 7 ಒಲಿಂಪಿಕ್ಸ್‌ಗಳಿಂದ ಸೇಂಟ್ ಲೂಸಿಯಾ ಬರಿಗೈಯಲ್ಲಿ ಮರಳಿತ್ತು. ಜೂಲಿಯನ್ 2013ರಲ್ಲಿ ನಿಧನ ಹೊಂದಿದ ತನ್ನ ತಂದೆಗೆ ಪದಕವನ್ನು ಅರ್ಪಿಸಿದರು. ಜೂಲಿಯನ್ 2022ರ ಕಾಮನ್ವೆಲ್ತ್ ಗೇಮ್ಸ್‌ನಲ್ಲಿ ರಜತ ಪದಕ ಗೆದ್ದಿದ್ದರು. ಜಮೈಕಾದ ತಾರೆ ಉಸೇನ್ ಬೋಲ್ಟ್ ತನಗೆ ಸ್ಫೂರ್ತಿ, ಸ್ಪರ್ಧೆಗೆ ಮುನ್ನ ಅವರ ಓಟದ ವಿಡಿಯೋ ನೋಡಿದ್ದೆ ಎಂದು ಜೂನಿಯನ್ ಹೇಳಿದ್ದಾರೆ.

ಫ್ರೇಸರ್ ಹೊರಬಿದ್ದ ಬಳಿಕ ಶಾಕಾರಿ ಚಿನ್ನ ಗೆಲ್ಲುವ ಫೇವರಿಟ್ ಎನಿಸಿದ್ದರೂ, ಜೂಲಿಯನ್ ಶಾಕ್ ನೀಡಿದರು. 0.15 ಸೆಕೆಂಡ್‌ಗಳಿಂದ ಶಾಕಾರಿಗೆ ಸೋಲುಣಿಸಿದ ಜೂಲಿಯನ್ 2008ರ ಬಳಿಕ ಒಲಿಂಪಿಕ್ಸ್ 100 ಮೀ. ಓಟದಲ್ಲಿ ಅತಿದೊಡ್ಡ ಅಂತರದ ಗೆಲುವಿನ ದಾಖಲೆ ಬರೆದರು. ಜೂಲಿಯನ್ ಸೆಮೀಸ್ ಹೀಟ್ಸ್‌ನಲ್ಲೂ 10.84 ಸೆಕೆಂಡ್‌ಗಳಲ್ಲಿ ಓಡಿ ಅಗ್ರಸ್ಥಾನ ಪಡೆದಿದ್ದರು.

ಇತ್ತೀಚಿಗೆ ನಡೆಯುತ್ತಿರುವ ಪ್ಯಾರಿಸ್ ಒಲಂಪಿಕ್ಸ್ ನಿಂದ ಯಾವ ದೇಶದ ಅಥ್ಲೆಟ್ ಗಳನ್ನ ನಿಷೇಧಿಸಲಾಗಿದೆ?

a) ಫ್ರಾನ್ಸ್
b) ಉಕ್ರೇನ್
c) ಪಾಕಿಸ್ತಾನ್
d) ಕೀನ್ಯಾ

ಸರಿಯಾದ ಉತ್ತರ: b)

ಇತ್ತೀಚೆಗೆ ಸುದ್ದಿಯಲ್ಲಿರುವ ಗೆಳತಿ ಯೋಜನೆ ಯಾವುದಕ್ಕೆ ಸಂಬಂಧಿಸಿದೆ?

a) ಆಸಿಡ್ ದಾಳಿಗೆ ಒಳಗಾದವರು
b) ಅಂಗವಿಕಲರು
c) ಬುದ್ಧಿಮಾಂದ್ಯರು
d) ಲೈಂಗಿಕ ಶೋಷಣೆಗೆ ಒಳಗಾದವರು

ಉತ್ತರ: a)

# ಗೆಳತಿ ಯೋಜನೆ 23 ಮಂದಿಗೆ ಮಾತ್ರ ಆಸರೆ!

ಎಚ್.ಪಿ. ಪುಣ್ಯವತಿ ಬೆಂಗಳೂರು
punyavathi.hp@timesofindia.com

ಆಸಿಡ್ ದಾಳಿಗೆ ತುತ್ತಾದ ಮಹಿಳೆಯರಿಗೆ ಆಸರೆಯಾಗಿರುವ 'ಗೆಳತಿ' ಯೋಜನೆಯ ಲಾಭ ಪಡೆದಿರುವವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ. ರಾಜ್ಯದಲ್ಲಿ ಈವರೆಗೆ ಕೇವಲ 23 ಮಂದಿ ಮಾತ್ರ ಯೋಜನೆಯ ಲಾಭ ಪಡೆದಿದ್ದಾರೆ!

ಹೌದು, ಯಾರದೋ ತಪ್ಪಿಗೆ, ಮತ್ಯಾರೋ ಬಲಿ ಎಂಬಂತೆ ಕಾಮುಕರು, ದ್ವೇಷಿಗಳು, ಗಂಡಂದಿರು, ಭಗ್ನ ಪ್ರೇಮಿಗಳು ಮಾಡುವ ಕೃತ್ಯವಿದು. ತಮಗೆ ಸಿಗದವರು ಕುರೂಪಿಗಳಾಗಲಿ ಎಂಬ ಕೆಟ್ಟ ಮನಸ್ಥಿತಿ ಹೊಂದಿರುವವರು ಬಾಳಿ ಬದುಕಬೇಕಿರುವ ಯುವತಿ/ಮಹಿಳೆಯರ ಮುಖಕ್ಕೆ ಆಸಿಡ್ ಎರಚಿ ಕುರೂಪಗೊಳಿಸುತ್ತಾರೆ.

ಆಸಿಡ್ ದಾಳಿಗೆ ಒಳಗಾದವರು ಒಂದೆಡೆ ಮಾನಸಿಕ ಮತ್ತು ದೈಹಿಕವಾಗಿ ಭಾರಿ ನೋವುಂಡರೆ, ಲಕ್ಷಣವಾಗಿದ್ದ ಮುಖ, ಕತ್ತನ್ನು ಸುಟ್ಟುಕೊಂಡು ಸಮಾಜದಲ್ಲಿ ತಲೆ ಎತ್ತಿ ನಡೆದಾಡಲಾಗದೆ ಕುಗ್ಗಿ ಹೋಗಿರುತ್ತಾರೆ. ಇಂತಹವರಿಗೆ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು 'ಗೆಳತಿ' ಯೋಜನೆಯ ಮೂಲಕ ಆಸರೆಯಾಗಿದ್ದು, ಸ್ವಂತ ಉದ್ಯೋಗ ಕೈಗೊಳ್ಳಲು ಸಾಲದ ನೆರವು ನೀಡುತ್ತಿದೆ. ರಾಜ್ಯದಲ್ಲಿ 82 ಮಂದಿ ಅಧಿಕೃತವಾಗಿ ಹೆಸರು ನೋಂದಾಯಿಸಿಕೊಂಡಿದ್ದರೂ ಈವರೆಗೆ ಸಾಲ ಪಡೆದಿರುವುದು 23 ಮಂದಿ ಮಾತ್ರ. ಉಳಿದವರು ಮನೆ ಬಿಟ್ಟು ಹೊರಬರಲು ಹಿಂಜರಿಯುತ್ತಿದ್ದಾರೆ.

**ಉದ್ಯೋಗ ಕಷ್ಟ:** ಕೆಲವರಿಗೆ ಮುಖ, ಕತ್ತು, ಕೈ ಸೇರಿದಂತೆ ದೇಹದ ಹಲವು ಭಾಗಗಳಿಗೆ ಆಸಿಡ್ ಬಿದ್ದು ಸುಟ್ಟು ಹೋಗಿದೆ. ಇನ್ನು ಕೆಲವರಿಗೆ ಕಣ್ಣು ಕೂಡ ಆಸಿಡ್‌ಗೆ ಬಲಿಯಾಗಿರುತ್ತದೆ. ಇಂತಹವರಿಗೆ ಉದ್ಯೋಗ ಸಿಗುವುದು ಕಷ್ಟ. ಇಂತಹವರು ನಾಲ್ಕು ಗೋಡೆಗಳ ಮಧ್ಯೆಯೇ ನಿತ್ಯ ಕುಗ್ಗಿ ಹೋಗುತ್ತಿದ್ದಾರೆ. ಇದನ್ನು ತಪ್ಪಿಸಿ, ಅವರನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ಉದ್ದೇಶದಿಂದ ರಾಜ್ಯ ಮಹಿಳಾ ಆಯೋಗವು 5 ಲಕ್ಷ ರೂ. ಸಾಲದ ನೆರವು (ಶೇ.50ರಷ್ಟು ಸಹಾಯಧನ, ಶೇ.50ರಷ್ಟು ಬಡ್ಡಿರಹಿತ ಸಾಲ) ನೀಡಲಿದೆ.

ಎಲ್ಲರೂ ಸಾಲ ಪಡೆಯಲು ಅರ್ಹರಲ್ಲ: ಗ್ಯಾಸ್ ಸ್ಟೌವ್, ಸೀಮೆಎಣ್ಣೆ ಸ್ಟೌವ್ ಸಿಡಿತ ಮತ್ತಿತರ ಪ್ರಕರಣಗಳಿಗೆ ತುತ್ತಾದವರು ಕೂಡ ಗೆಳತಿ ಯೋಜನೆಯಡಿ ಸಾಲ ಪಡೆಯಲು ಆಗಮಿಸುತ್ತಾರೆ. ಆದರೆ ಈ ಯೋಜನೆ ಇರುವುದು ಕೇವಲ ಆಸಿಡ್ ದಾಳಿಗೆ ತುತ್ತಾದವರಿಗೆ ಮಾತ್ರ. ಅದೂ ಆಸಿಡ್‌ನಿಂದ ಶೇ.50ರಷ್ಟು ಸುಟ್ಟವರು ಇದರ ಲಾಭ ಪಡೆಯಲು ಅರ್ಹರಾಗಿರುತ್ತಾರೆ. ದಾಳಿಯ ನಂತರ ದಾಳಿ ನಡೆಸಿದವರ ವಿರುದ್ಧ ಎಫ್‌ಐಆರ್ ದಾಖಲಾಗಿರುತ್ತದೆ. ಇದರ ಆಧಾರದಲ್ಲಿ ಮೆಡಿಕಲ್ ಸರ್ಟಿಫಿಕೇಟ್ ಮಾಡಿಸಿದವರಿಗೆ ಸಾಲದ ನೆರವು ಸಿಗುತ್ತದೆ ಎನ್ನುತ್ತಾರೆ ಮಹಿಳಾ ಅಭಿವೃದ್ಧಿ ನಿಗಮದ ಅಧಿಕಾರಿಗಳು.



**ರಾಜ್ಯದಲ್ಲಿದ್ದಾರೆ 82 ಮಂದಿ ಆಸಿಡ್ ದಾಳಿಗೆ ತುತ್ತಾದ ನೋಂದಾಯಿತರು!**



ಆಸಿಡ್ ದಾಳಿಗೆ ತುತ್ತಾದವರ ಪೈಕಿ ಕೆಲವರು ಧೈರ್ಯವಾಗಿ ಮುಂದೆ ಬಂದು ಸಾಲ ಪಡೆದು ಉದ್ಯಮ ಆರಂಭಿಸಿದರೆ, ಹಲವರು ಹೊರಗಡೆ ಬರಲು ಭಯ ಪಡುತ್ತಿದ್ದಾರೆ. ಇಂತಹವರಿಗೆ ನಾವೇ ದೂರವಾಣಿ ಕರೆ ಮಾಡಿ ತಿಳಿ ಹೇಳುತ್ತಿದ್ದೇವೆ.

– **ಜೆ. ಪದ್ಮಾವತಿ** ಅಧ್ಯಕ್ಷರು, ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

**ಸರಕಾರಕ್ಕೆ ನಾನು ಋಣಿ:** ನಾನು ಆಸಿಡ್ ದಾಳಿಗೆ ತುತ್ತಾಗಿ ಕುಗ್ಗಿ ಹೋಗಿದ್ದೆ. ಈ ವೇಳೆ ನನ್ನ ನೆರವಿಗೆ ಬಂದಿದ್ದು 'ಗೆಳತಿ'. ಸರಕಾರಕ್ಕೆ ಋಣಿ ಎನ್ನುತ್ತಾರೆ ಹೆಸರು ಹೇಳಲಿಚ್ಛಿಸದ ಚಿತ್ರದುರ್ಗ ಜಿಲ್ಲೆಯ ಆಸಿಡ್ ದಾಳಿ ಸಂತ್ರಸ್ತೆ.

Vencobb
ಫಾರಂ ಧಾರಣೆ ಮಾರಾಟದ ಪ್ರತಿ ಕೆಜಿಗೆ ಸಲಹೆಯ ಬೆಲೆ
₹ 78/-
ರೀಟೇಲ್ ಮಾರಾಟದ ದರ ಪ್ರತಿ ಕೆಜಿಗೆ ಬೆಲೆ ₹118/-
ವಿಥ್ ಸ್ಕಿನ್ ₹166/- | ವಿಥೌಟ್ ಸ್ಕಿನ್ ₹190/-
ಗ್ರಾಹಕರಿಗೋಸ್ಕರ ನೀಡಲಾಗಿದೆ

ಕರ್ನಾಟಕದ ಉತ್ತಮ ಅಡಿಕೆ ಉತ್ಕೃಷ್ಟ ಸ್ವಾದ
Saffron Blended
Super gem
PAN MASALA
NOT FOR MINORS

## ರಾಷ್ಟ್ರೀಯ ಕೈಮಗ್ಗ ದಿನವನ್ನು ಎಂದು ಆಚರಿಸಲಾಗುತ್ತದೆ?

a) ಆಗಸ್ಟ್ 6
b) ಆಗಸ್ಟ್ 7
c) ಆಗಸ್ಟ್ 8
d) ಆಗಸ್ಟ್ 9

ಉತ್ತರ: b)

# ಈ ದಿನದ ಮಹತ್ವ

## ಆಗಸ್ಟ್ - 7:
## ರಾಷ್ಟ್ರೀಯ ಕೈಮಗ್ಗ ದಿನ

ವಾರ್ಷಿಕವಾಗಿ ಆಗಸ್ಟ್ 7ರಂದು ರಾಷ್ಟ್ರೀಯ ಕೈಮಗ್ಗ ದಿನವನ್ನು ಆಚರಿಸಲಾಗುತ್ತದೆ. ಭಾರತೀಯ ಕುಶಲಕರ್ಮಿಗಳು ಮತ್ತು ಕೈ ಮಗ್ಗ ನೇಯ್ಗೆ ಸಮುದಾಯದ ಪ್ರಯತ್ನಗಳನ್ನು ಗುರುತಿಸಲು ಮತ್ತು ಪ್ರಶಂಸಿಸಲು ಈ ದಿನ ಸಮರ್ಪಿತವಾಗಿದೆ.

ಈ ದಿನವು ವಿಶೇಷವಾಗಿ ಮಹಿಳಾ ನೇಕಾರರಿಗೆ ಅವರ ಬೆಳವಣಿಗೆ ಮತ್ತು ಸಬಲೀಕರಣಕ್ಕಾಗಿ ಬೆಂಬಲವನ್ನು ಸೂಚಿಸುತ್ತದೆ. ಭಾರತವು ವಿಶ್ವದಲ್ಲಿಯೇ ಅತಿದೊಡ್ಡ ಕೈಮಗ್ಗ ಉದ್ಯಮದ ನಾಡು. ಕೈಮಗ್ಗವು ಗ್ರಾಮೀಣ ಮತ್ತು ಅರೆ-ನಗರ ಪ್ರದೇಶಗಳಲ್ಲಿ ಆರ್ಥಿಕತೆಯ ಪ್ರಮುಖ ಮೂಲಗಳಲ್ಲಿ ಒಂದಾಗಿದೆ.



7ನೇ ಆಗಸ್ಟ್ 1905 ರಂದು ಪ್ರಾರಂಭವಾದ ಸ್ವದೇಶಿ ಆಂದೋಲನವನ್ನು ಸ್ಮರಿಸುವ ಪ್ರಮುಖ ಉದ್ದೇಶವನ್ನು ಈ ದಿನ ಹೊಂದಿದೆ. 2015ರಲ್ಲಿ, ಭಾರತ ಸರ್ಕಾರವು ಪ್ರತಿ ವರ್ಷ ಆಗಸ್ಟ್ 7ನ್ನು ರಾಷ್ಟ್ರೀಯ ಕೈಮಗ್ಗ ದಿನವೆಂದು ಘೋಷಿಸಿತು. ಮೊದಲ ರಾಷ್ಟ್ರೀಯ ಕೈಮಗ್ಗ ದಿನವನ್ನು 7 ಆಗಸ್ಟ್ 2015ರಂದು ಪ್ರಧಾನಮಂತ್ರಿ ನರೇಂದ್ರ ಮೋದಿ ಅವರು ಚೆನ್ನೈನಲ್ಲಿ ಉದ್ಘಾಟಿಸಿದರು.

**ರಾಷ್ಟ್ರಕೂಟರ ಅರಸ ಧ್ರುವನ ಅವಧಿಯ ಶಾಸನ ಜೂನ್ ನಲ್ಲಿ ಯಾವ ಜಿಲ್ಲೆಯಲ್ಲಿ ಪತ್ತೆಯಾಯಿತು?**

a) ಮೈಸೂರು
b) ಬೆಂಗಳೂರು
c) ಶಿವಮೊಗ್ಗ
d) ತುಮಕೂರು

**ಉತ್ತರ: c)**

1) ರಾಷ್ಟ್ರಕೂಟರ ಅರಸ ಧ್ರುವನ ಅವಧಿಯ ಶಾಸನ ಜೂನ್‌ನಲ್ಲಿ ಯಾವ ಜಿಲ್ಲೆಯಲ್ಲಿ ಪತ್ತೆಯಾಯಿತು?

ಎ) ಮೈಸೂರು ಬಿ) ಬೆಂಗಳೂರು ಗ್ರಾಮಾಂತರ

ಸಿ) ಶಿವಮೊಗ್ಗ ಡಿ) ತುಮಕೂರು

ಉತ್ತರ: ಸಿ) ಶಿವಮೊಗ್ಗ

- ವಿವರಣೆ: ಶಿವಮೊಗ್ಗ ತಾಲ್ಲೂಕಿನ ಸೊರಬ ತಾಲ್ಲೂಕಿನ ಕುಪ್ಪಗಡ್ಡೆ ಸಮೀಪದ ಕೊರಕೊಡು ಗ್ರಾಮದಲ್ಲಿ ಎಂಟನೆಯ ಶತಮಾನದ ರಾಷ್ಟ್ರಕೂಟರ ಅರಸ ಧ್ರುವನ ಅವಧಿಯ ಶಾಸನ ಪತ್ತೆಯಾಗಿದೆ. ಹವ್ಯಾಸಿ ಇತಿಹಾಸ ಸಂಶೋಧಕರಾದ ರಮೇಶ ಬಿ. ಹಿರೇನಂಬೂರು ಮತ್ತು ಮಂಜಪ್ಪ ಚುರ್ಚಿಗುಂಡಿ ಕ್ಷೇತ್ರ ಅಧ್ಯಯನ ಕೈಗೊಂಡಾಗ ಈ ಶಾಸನ ಕಂಡುಬಂದಿದೆ.
- ಶಾಸನವು 17 ಸಾಲುಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ವಿಜಯದ ಸಂಕೇತ ಕುದುರೆಯ ಶಿಲ್ಪವಿದೆ. ಕ್ರಿ.ಶ. 780–793ರ ಅವಧಿಯಲ್ಲಿ ರಾಷ್ಟ್ರಕೂಟರ ದೊರೆ ಧ್ರುವನು ಆಡಳಿತ ನಡೆಸುತ್ತಿದ್ದಾಗ ಬನವಾಸಿ ಪನ್ನಿಚ್ಛಾಸಿರ ನಾಡಿನ ಆಡಳಿತವನ್ನು ಸೇವುಣಾರ ಮರಕ್ಕೆ ಅರಸ ನೋಡಿಕೊಳ್ಳುತ್ತಿದ್ದ. ಈ ಅವಧಿಯಲ್ಲಿ ಮರಕ್ಕೆ ಅರಸನ ಮಹಾಮಾತ್ರನಯು ಕೊರಕೊಡಿನ ದೇವರಿಗೆ ಸಲ್ಲುವ ದ್ರವ್ಯದಲ್ಲಿ ದಿಂಡೂರಿನಲ್ಲಿ ದೇವಾಲಯ ನಿರ್ಮಿಸಿ ಅದರ ನಿರ್ವಹಣೆಗೆ ಕೃಷಿಯೋಗ್ಯ ಭೂಮಿಯನ್ನು ದಾನ ನೀಡಿದ ಮಾಹಿತಿ ಇದೆ. ಕೊನೆಯಲ್ಲಿ ಈ ದೇವಾಲಯವನ್ನು ದೇವಾವರಿಯರ ಮಗನಾದ ಶಿಲ್ಪಿ ಶ್ರೀಧರನು ನಿರ್ಮಿಸಿದ ಎಂಬ ವಿವರವಿದೆ.
- ಕೊರಕೊಡಿಯಲ್ಲಿ 12–13ನೆಯ ಶತಮಾನದ 5 ತುರುಗೋಳ್ ವೀರಗಲ್ಲುಗಳು ಪ್ರಕಟವಾಗಿವೆ. ಶಾಸನ

**ದೀನಬಂಧು ಚೋಟು ರಾಮ್ ಥರ್ಮಲ್ ಪವರ್ ಪ್ಲಾಂಟ್ ಯಾವ ರಾಜ್ಯದಲ್ಲಿದೆ?**

a) ಹರಿಯಾಣ

b) ರಾಜಸ್ಥಾನ

c) ಗುಜರಾತ

d) ಉತ್ತರ ಪ್ರದೇಶ

**ಉತ್ತರ: a)**

# ದಿನಕ್ಕೊಂದು ಪ್ರಶ್ನೆ

• ಎಲ್.ಪಿ.ಕುಲಕರ್ಣಿ, ಬಾದಾಮಿ

• ದೀನಬಂಧು ಛೋಟು ರಾಮ್ ಥರ್ಮಲ್ ಪವರ್ ಪ್ಲಾಂಟ್ ಯಾವ ರಾಜ್ಯದಲ್ಲಿದೆ?

- ಎ. ಹರಿಯಾಣ.
- ಬಿ. ರಾಜಸ್ಥಾನ.
- ಸಿ. ಗುಜರಾತ್.
- ಡಿ. ಉತ್ತರ ಪ್ರದೇಶ.

ಉತ್ತರ: ಎ. ಹರಿಯಾಣ.



## ಮಾಹಿತಿ

ಹರಿಯಾಣದ ಯಮುನಾನಗರದಲ್ಲಿರುವ ದೀನಬಂಧು ಛೋಟು ರಾಮ್ ಥರ್ಮಲ್ ಪರ್ವ ಪ್ಲಾಂಟ್, 800 ಮೆಗಾವ್ಯಾಟ್ ವಿದ್ಯುತ್ ಉತ್ಪಾದನಾ ಸಾಮರ್ಥ್ಯದ ಘಟಕವನ್ನು 57 ತಿಂಗಳಲ್ಲಿ ಪೂರ್ಣಗೊಳಿಸಲು ನಿರ್ಧರಿಸಲಾಗಿದೆ. ಇತ್ತೀಚೆಗೆ ಹೈಪವರ್ ವರ್ಕರ್ಸ್ ಖರೀದಿ ಸಮಿತಿ ಸಭೆಯಲ್ಲಿ ಮುಖ್ಯಮಂತ್ರಿ ಮನೋಹರ್ ಲಾಲ್ ಅವರು ಭಾರತ್ ಹೆವಿ ಎಲೆಕ್ಟ್ರಿಕಲ್ಸ್ ಲಿಮಿಟೆಡ್‌ಗೆ 6900 ಕೋಟಿ ರು. ಟೆಂಡರ್ ನೀಡಿದ್ದರು. ಸ್ಥಾವರದ ಅಲ್ಟ್ರಾ-ಸೂಪರ್‌ಕ್ರಿಟಿಕಲ್ ಘಟಕವು ಶೇ.8 ಸಾಮರ್ಥ್ಯವನ್ನು ಹೆಚ್ಚಿಸುತ್ತದೆ, ಕಲ್ಲಿದ್ದಲು ಬಳಕೆ ಮತ್ತು ವಿದ್ಯುತ್ ವೆಚ್ಚವನ್ನು ಕಡಿಮೆ ಮಾಡುತ್ತದೆ. 'ಮೇಕ್ ಇನ್ ಇಂಡಿಯಾ' ನೊಂದಿಗೆ ಜೋಡಿಸಲಾದ ಇದು ಸ್ಥಳೀಯ ತಂತ್ರಜ್ಞಾನವನ್ನು ಬಳಸಿಕೊಳ್ಳುತ್ತದೆ, ತಡೆರಹಿತ ವಿದ್ಯುತ್ ಸರಬರಾಜನ್ನು ಖಾತ್ರಿಪಡಿಸುತ್ತದೆ ಮತ್ತು ವೇಗವಾದ, ಪರಿಸರ ಸ್ನೇಹಿ ವಿದ್ಯುತ್ ಉತ್ಪಾದನೆಗಾಗಿ ಸುಧಾರಿತ, ಸಣ್ಣ-ಗಾತ್ರದ ಘಟಕಗಳನ್ನು ಒಳಗೊಂಡಿದೆ.

ಖ್ಯಾತ ವಿಜ್ಞಾನಿ ಹಸಿರು ಕ್ರಾಂತಿಯ ರೂವಾರಿ ಎಂ ಎಸ್ ಸ್ವಾಮಿನಾಥನ್ ಅವರಿಗೆ ಭಾರತ ಸರ್ಕಾರ ಭಾರತ ರತ್ನವನ್ನು ನೀಡಿ ಗೌರವಿಸಿದೆ?

a) 2024
b) 2023
c) 2022
d) 2021

ಉತ್ತರ:- a)



# ಜನುಮ ದಿನ

## ಎಂ.ಎಸ್. ಸ್ವಾಮಿನಾಥನ್



- ದೇಶದ ಖ್ಯಾತ ಕೃಷಿ ವಿಜ್ಞಾನಿ, ಹಸಿರು ಕ್ರಾಂತಿಯ ರೂವಾರಿ ಎಂ.ಎಸ್. ಸ್ವಾಮಿನಾಥನ್ ಆಗಸ್ಟ್ 7, 1925 ರಂದು ತಮಿಳುನಾಡಿನ ಕುಂಭಕೋಣಂನಲ್ಲಿ ಜನಿಸಿದರು. 60ರ ದಶಕದಲ್ಲಿ ಭಾರತ ಮತ್ತು ಪಾಕಿಸ್ತಾನ ಬರ ಪರಿಸ್ಥಿತಿಯಿಂದ ಪಾರಾಗುವಲ್ಲಿ ಸ್ವಾಮಿನಾಥನ್ ಪಾತ್ರ ಪ್ರಮುಖವಾದುದು. ಅಂತಾರಾಷ್ಟ್ರೀಯ ಅಕ್ಕಿ ಸಂಶೋಧನಾ ಕೇಂದ್ರದ ನಿರ್ದೇಶಕರಾಗಿ, ಅನನ್ಯ ಸಾಧನೆ ತೋರಿದ್ದಾರೆ. ದೇಶ-ವಿದೇಶಗಳ ಪ್ರತಿಷ್ಠಿತ ಪ್ರಶಸ್ತಿಗಳು ಅವರಿಗೆ ಲಭಿಸಿವೆ. 2024ರಲ್ಲಿ ಭಾರತ ಸರಕಾರ ಸ್ವಾಮಿನಾಥನ್ ಅವರಿಗೆ ದೇಶದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ 'ಭಾರತ ರತ್ನ' ನೀಡಿ ಪುರಸ್ಕರಿಸಿದೆ. ಅವರು ಸೆಪ್ಟೆಂಬರ್ 28, 2023ರಂದು ನಿಧನರಾದರು.

**ಭಾರತದ ಮೊಟ್ಟ ಮೊದಲ ನೊಬೆಲ್ ಪ್ರಶಸ್ತಿ ವಿಜೇತರಾದ ರವಿ ರವೀಂದ್ರನಾಥ್ ಠಾಕೂರ್ ಅವರಿಗೆ ಪುರಸ್ಕಾರ ದೊರೆತ ವರ್ಷ ಯಾವುದು?**

a) 1913
b) 1930
c) 1960
d) 1995

ಉತ್ತರ:–a)

# ಭಾರತೀಯರು ಸದಾ ಸ್ಮರಿಸಬೇಕಾದ ರಾಷ್ಟ್ರಕವಿ ಠಾಗೋರ್

**ಇಂದು ನೊಬೆಲ್ ಪ್ರಶಸ್ತಿ ವಿಜೇತ, ರಾಷ್ಟ್ರಕವಿ ರವೀಂದ್ರನಾಥ್ ಠಾಗೋರ್ ಅವರ ಸಂಸ್ಮರಣಾ ದಿನ. ಭಾರತೀಯರಿಗೆ ರಾಷ್ಟ್ರಗೀತೆ ನೀಡಿದ ಠಾಗೋರ್ ಸಾಹಿತ್ಯ, ಸಂಗೀತ, ಚಿತ್ರಕಲೆ ಹೀಗೆ ಹಲವು ಕ್ಷೇತ್ರಗಳಲ್ಲಿ ಆಳವಾದ ಛಾಪು ಮೂಡಿಸಿದವರು.**

ರವೀಂದ್ರನಾಥ ಠಾಗೋರ್ ಅವರು 7 ಮೇ 1861 ರಂದು ಜನಿಸಿದರು.

ಅವರು ಬಂಗಾಳಿ ಮಹಾ ವಿದ್ವಾಂಸ. ಕವಿಗಳಾಗಿ, ಕಾದಂಬರಿಕಾರರಾಗಿ, ಸಂಗೀತಕಾರರಾಗಿ ಮತ್ತು ನಾಟಕ ರಚಿಸುವ ಮೂಲಕ ಅವರು 19ನೇ ಶತಮಾನದ ಕೊನೆಯಲ್ಲಿ ಮತ್ತು 20ನೇ ಶತಮಾನದ ಆರಂಭದಲ್ಲಿ ಬಂಗಾಳಿ ಸಾಹಿತ್ಯ ಮತ್ತು ಸಂಗೀತಕ್ಕೆ ಹೊಸ ರೂಪ ಕೊಟ್ಟರು. ಅವರು ರಚಿಸಿದ ಸೂಕ್ಷ್ಮ ಸಂವೇದನೆಯ, ನವನವೀನವೂ ಮತ್ತು ಸುಂದರವೂ ಆದ ಪದ್ಯ, ಗೀತಾಂಜಲಿ ಕಾವ್ಯಕ್ಕೆ 1913ರ

ನೊಬೆಲ್ ಸಾಹಿತ್ಯ ಪ್ರಶಸ್ತಿದಕ್ಕಿತು. ಈ ಮೂಲಕ ಅವರು ನೊಬೆಲ್ ಪ್ರಶಸ್ತಿ ಪುರಸ್ಕೃತರಾದ ಏಷ್ಯಾದ ಮೊದಲಿಗರು ಎಂಬ ಗೌರವಕ್ಕೆ ಪಾತ್ರರಾದರು.

ಕಲ್ಕತ್ತಾದ ಪಿರಾಲಿ ಬ್ರಾಹ್ಮಣ ಕುಟುಂಬಕ್ಕೆ ಸೇರಿದ ಠಾಗೋರ್ ತಮ್ಮ ಎಂಟನೇ ವಯಸ್ಸಿನಲ್ಲಿ ಪದ್ಯ ರಚನೆ ಆರಂಭಿಸಿದರು.

ಹದಿನಾರನೇ ವಯಸ್ಸಿನಲ್ಲಿ ಅವರು ಭಾನುಶಿಂಘೊ (ಸೂರ್ಯ ಸಿಂಹ) ಎಂಬ ಗುಪ್ತನಾಮದಡಿ ಮೊದಲ ಮಹತ್ವದ ಕವನವನ್ನು ಪ್ರಕಟಿಸಿದರು ಮತ್ತು ಅವರು ಮೊದಲು ಸಣ್ಣ ಕಥೆಗಳು ಮತ್ತು ನಾಟಕಗಳನ್ನು 1877ರಲ್ಲಿ ಬರೆದರು.

ಬ್ರಿಟಿಷ್ ಆಡಳಿತವನ್ನು ಬಹಿರಂಗವಾಗಿ ಖಂಡಿಸಿದ ಟಾಗೋರ್ ಭಾರತೀಯ ಸ್ವಾತಂತ್ರ್ಯ ಚಳವಳಿಯನ್ನು ಬೆಂಬಲಿಸಿದರು. ಅವರು ಜಗತ್ತಿಗೆ ನೀಡಿದ ಬಹುದೊಡ್ಡ ಗ್ರಂಥಮಾಲೆ ಮತ್ತು ಅವರು ಸ್ಥಾಪಿಸಿದ ಸಂಸ್ಥೆ ವಿಶ್ವ-ಭಾರತಿ ವಿಶ್ವವಿದ್ಯಾನಿಲಯ-ಇವು ಅವರ ಪ್ರಮುಖ ಕೊಡುಗೆ.

ಭಾರತೀಯ ಸಾಂಪ್ರದಾಯಕ ಶಾಸ್ತ್ರೀಯ ಕಠೋರತೆಯ ಚೌಕಟ್ಟಿನಿಂದ ಹೊರ ಬಂದ ಟಾಗೋರ್ ಬಂಗಾಳಿ ಕಲಾ ಪ್ರಕಾರಕ್ಕೆ ಹೊಸ ಮೆರಗು ನೀಡಿದರು.

ಅವರ ಕಾದಂಬರಿಗಳು, ಸಣ್ಣ ಕಥೆಗಳು, ಕವನಗಳು, ನೃತ್ಯ-ನಾಟಕಗಳು, ಮತ್ತು ಪ್ರಬಂಧಗಳು ರಾಜಕೀಯ ಮತ್ತು ವೈಯಕ್ತಿಕ ವಿಷಯಗಳನ್ನೆಲ್ಲಾ ಅನುರಣಿಸಿವೆ.

ಗೀತಾಂಜಲಿ (ಗೀತೆಗಳು), ಗೋರ (ಸುಂದರ ಮುಖ)ಮತ್ತು ಘರೇ ಬೈರೆ((ಮನೆ ಮತ್ತು ಪ್ರಪಂಚ)) ಇವರ ಹೆಸರಾಂತ ಕೃತಿಗಳು. ಅವರು ರಚಿಸಿದ ಕವನಗಳು, ಸಣ್ಣ ಕಥೆಗಳು, ಮತ್ತು ಕಾದಂಬರಿಗಳು ಅವುಗಳ ಸಾಹಿತ್ಯಕ್ಕೆ, ಆಡುಮಾತಿನ ಪ್ರಯೋಗಕ್ಕೆ, ವಿಚಾರಶೀಲ ವಾಸ್ತವಿಕತೆ ಗೆ, ಮತ್ತು ತತ್ವಶಾಸ್ತ್ರದ ಅವಲೋಕನಕ್ಕೆ ಪ್ರಶಂಸನೀಯವಾಗಿವೆ.

ಠಾಗೋರ್ ರಚಿಸಿದ ಎರಡು ಗೀತೆಗಳಿಗೆ ರಾಷ್ಟ್ರ ಮನ್ನಣೆ ಸಿಕ್ಕಿದೆ. 'ಜನ ಗಣ ಮನ' ಭಾರತದ ರಾಷ್ಟ್ರ ಗೀತೆಯಾಗಿ ಅಂಗೀಕರಿಸಲಾದರೆ 'ಅಮರ್ ಶೋನರ್ ಬಾಂಗ್ಲಾ' ಬಾಂಗ್ಲಾದೇಶದ್ದು.

ಬಳ್ಳಾರಿ ಬೆಳಗಾಯಿತು ವಿಶೇಷ

ಕಾವ್ಯಕ್ಕೆ ಹೆಸರುವಾಸಿಯಾದರೂ, ಠಾಗೋರ್ ಕಾದಂಬರಿಗಳು, ಪ್ರಬಂಧಗಳು, ಸಣ್ಣ ಕಥೆಗಳು, ಪ್ರವಾಸ ಕಥನಗಳು, ನಾಟಕಗಳು, ಮತ್ತು ಸಾವಿರಾರು ಗೀತೆಗಳನ್ನೂ ರಚಿಸಿದ್ದಾರೆ. ಗದ್ಯ ಪ್ರಕಾರದಲ್ಲಿ ಟಾಗೋರ್‌ರ ಕಿರು ಕಥೆಗಳು ಅತ್ಯುತ್ಕೃಷ್ಟ ಎನಿಸಿವೆ.

ಬೆಂಗಾಲಿ ಭಾಷೆಯ ಹೊಸ ಶೈಲಿಯ ಜನಕ ಎಂಬ ಕೀರ್ತಿಗೆ ಇವರು ಭಾಜನರಾಗಿದ್ದಾರೆ.

ಲಯಬದ್ಧತೆ, ಆಶಾವಾದ, ಮತ್ತು ಗೇಯ ಗುಣದಿಂದಾಗಿ ಅವರ ಬರಹಗಳು ಗುರುತಿಸಲ್ಪಟ್ಟಿವೆ. ಜನ ಸಾಮಾನ್ಯರ ಜೀವನದ ಸುಲಭ ಸರಳ ವಿಷಯಗಳಿಂದ ಅವರ ಕಿರುಕಥೆಗಳ ಹಂದರ ನಿರ್ಮಿಸಲಾಗಿದೆ.ರವೀಂದ್ರನಾಥ ಠಾಗೋರ್ ರವರು 1941ರ ಆಗಸ್ಟ್ 7ರಂದು ಕೊನೆಯುಸಿರೆಳೆದರು. ಠಾಗೂರ್ ಭೌತಿಕವಾಗಿ ನಮ್ಮನಗಲಿದ್ದರೂ, ಸದಾ ನಮ್ಮ ಮನಸ್ಸಿನಲ್ಲಿ ನೆಲೆಸಿದ್ದಾರೆ.

ಇತ್ತೀಚೆಗೆ ರಾಷ್ಟ್ರಪತಿ ದ್ರೌಪದಿ ಮುರ್ಮು ಅವರಿಗೆ ಯಾವ ದೇಶದ ಅತ್ಯುನ್ನತ ನಾಗರಿಕ ಗೌರವವಾದ ಕಂಪ್ಯಾನಿಯನ್ ಆಫ್ ದಿ ಆರ್ಡರ್ ಆಫ್ ದಿ ಫಿಜಿ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ?

a) ಫಿಜಿ
b) ನೇಪಾಳ
c) ಕೀನ್ಯಾ
d) ಕೆನಡಾ

ಸರಿಯಾದ ಉತ್ತರ: a)

# ಮುರ್ಮುಗೆ ಪ್ರತಿಷ್ಠಿತ ಫಿಜಿ ಪ್ರಶಸ್ತಿ

**ಸುವಾ/ ಫಿಜಿ:** ರಾಷ್ಟ್ರಪತಿ ದ್ರೌಪದಿ ಮುರ್ಮು ಅವರಿಗೆ ದೇಶದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ ಕಂಪ್ಯಾನಿಯನ್ ಆಫ್ ದಿ ಆರ್ಡರ್ ಆಫ್ ಫಿಜಿ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ. ಫಿಜಿಯ ಅಧ್ಯಕ್ಷ ರತು ವಿಲಿಯಮ್ ಮೈವಲಿಲಿ ಕಟೋನಿವೆರೆ ಅವರು ರಾಷ್ಟ್ರಪತಿ ದ್ರೌಪದಿ ಮುರ್ಮು ಅವರಿಗೆ ಆರ್ಡರ್ ಆಫ್ ಫಿಜಿ ನೀಡಿ ಗೌರವಿಸಿದ್ದಾರೆ. ಇದು ಫಿಜಿಯ ಅತ್ಯುನ್ನತ ನಾಗರಿಕ ಪ್ರಶಸ್ತಿಯಾಗಿದೆ ಎಂದು ಅಧ್ಯಕ್ಷರ ಕಚೇರಿಯು ಎಕ್ಸ್‌ನಲ್ಲಿನ ಪೋಸ್ಟ್‌ನಲ್ಲಿ ತಿಳಿಸಿದೆ.

ಫಿಜಿಗೆ ಎರಡು ದಿನಗಳ ಭೇಟಿಯಲ್ಲಿರುವ ಮುರ್ಮು, ಈ ಗೌರವವು ಭಾರತ ಮತ್ತು ಫಿಜಿ ನಡುವಿನ ಸ್ನೇಹದ ಆಳವಾದ ಸಂಬಂಧದ ಪ್ರತಿಬಿಂಬವಾಗಿದೆ. ಇದು ಭಾರತದ ರಾಷ್ಟ್ರಪತಿಯೊಬ್ಬರು ದ್ವೀಪಸಮೂಹ ರಾಷ್ಟ್ರಕ್ಕೆ ನೀಡಿದ ಮೊದಲ ಭೇಟಿಯಾಗಿದೆ. ಮುರ್ಮು ಅವರು ಫಿಜಿ ಸಂಸತ್‌ನ್ನು ಉದ್ದೇಶಿಸಿ ಮಾತನಾಡಿದ ಮುರ್ಮು, ಭಾರತವು ಜಾಗತಿಕ ಮಟ್ಟದಲ್ಲಿ ಬಲವಾಗಿ ಹೊರಹೊಮ್ಮುತ್ತಿದ್ದಂತೆ, ನಿಮ್ಮ ಆದ್ಯತೆಗಳ ಪ್ರಕಾರ, ಬಲವಾದ, ಹೆಚ್ಚು ಚೇತರಿಸಿಕೊಳ್ಳುವ ಮತ್ತು ಹೆಚ್ಚು ಸಮೃದ್ಧ ರಾಷ್ಟ್ರವನ್ನು ನಿರ್ಮಿಸಲು ನಾವು ಫಿಜಿಯೊಂದಿಗೆ ಪಾಲುದಾರರಾಗಲು ಸಿದ್ಧರಾಗಿದ್ದೇವೆ. ನಮ್ಮ ಪಾಲುದಾರಿಕೆಯಲ್ಲಿ ಪೂರ್ಣ ಸಾಮರ್ಥ್ಯವನ್ನು ಆರಂಭಿಸಲು ನಾವು ಒಗ್ಗೂಡೋಣ. ನಮ್ಮ ಪ್ರೀತಿಯ ಎರಡೂ ದೇಶಗಳ ಜನರ ಪರಸ್ಪರ ಲಾಭ ಎಂದಿದ್ದಾರೆ.



## ಪ್ರಧಾನಿ ನರೇಂದ್ರ ಮೋದಿ ಅಭಿನಂದನೆ

ಇದು ಪ್ರತಿಯೊಬ್ಬ ಭಾರತೀಯನಿಗೆ ಅಪಾರ ಹೆಮ್ಮೆ ಮತ್ತು ಸಂತೋಷದ ಕ್ಷಣವಾಗಿದೆ ಎಂದು ಪ್ರಧಾನಿ ನರೇಂದ್ರ ಮೋದಿ ರಾಷ್ಟ್ರಪತಿ ದ್ರೌಪದಿ ಮುರ್ಮು ಅವರನ್ನು ಅಭಿನಂದಿಸಿದ್ದಾರೆ. ಫಿಜಿಯ ಅತ್ಯುನ್ನತ ನಾಗರಿಕ ಪ್ರಶಸ್ತಿ ಮುಡಿಗೇರಿಸಿಕೊಂಡ ರಾಷ್ಟ್ರಪತಿ ಮುರ್ಮು ಅವರಿಗೆ ಅಭಿನಂದನೆಗಳು. ಇದು ಪ್ರತಿಯೊಬ್ಬ ಭಾರತೀಯನಿಗೆ ಅಪಾರ ಹೆಮ್ಮೆ ಮತ್ತು ಸಂತೋಷದ ಕ್ಷಣವಾಗಿದೆ. ಇದು ರಾಷ್ಟ್ರಪತಿ ಮುರ್ಮು ಅವರ ನಾಯಕತ್ವದ ಮನ್ನಣೆಯಾಗಿದೆ ಎಂದು ಮೋದಿ ಎಕ್ಸ್‌ನಲ್ಲಿ ಬರೆದುಕೊಂಡಿದ್ದಾರೆ.

**ಈ ಕೆಳಗಿನ ಯಾರಿಗೆ ವಿಜ್ಞಾನ ಕ್ಷೇತ್ರದಲ್ಲಿ ನೀಡಲಾಗುವ ರಾಷ್ಟ್ರೀಯ ವಿಜ್ಞಾನ ಪುರಸ್ಕಾರವನ್ನು ಕೇಂದ್ರ ಸರ್ಕಾರ ಪ್ರಕಟಿಸಿದೆ?**

a) ಪದ್ಮನಾಭನ್
b) ಕೃಷ್ಣಮೂರ್ತಿ
c) ರವಿಚಂದ್ರನ್
d) ಶ್ವೇತ ಕುಮಾರ್

ಉತ್ತರ: a)

# ಐಐಎಸ್ಸಿಯ ಪದ್ಮನಾಭನ್‌ಗೆ ಚೊಚ್ಚಲ ವಿಜ್ಞಾನ ರತ್ನ ಪ್ರಶಸ್ತಿ

## ಚಂದ್ರಯಾನ 3 ವಿಜ್ಞಾನಿಗಳಿಗೆ ತಂಡದ ಗೌರವ

**ನವದೆಹಲಿ:** ವಿಜ್ಞಾನ ಕ್ಷೇತ್ರದ ಸಾಧಕರಿಗೆ ನೀಡಲಾ ಗುವ ರಾಷ್ಟ್ರೀಯ ವಿಜ್ಞಾನ ಪುರಸ್ಕಾರಗಳನ್ನು ಕೇಂದ್ರ ಸರ್ಕಾರ ಪ್ರಕಟಿಸಿದೆ. ಜೊತೆಗೆ ಇದೇ ಮೊದಲ ಬಾರಿಗೆ ನೀಡಲಾಗುತ್ತಿರುವ ವಿಜ್ಞಾನ ರತ್ನ ಪುರಸ್ಕೃತರ ಹೆಸರನ್ನು ಪ್ರಕಟಿಸಲಾಗಿದೆ.

ಖ್ಯಾತ ಜೀವರಸಾಯನ ಶಾಸ್ತ್ರಜ್ಞ, ಪದ್ಮವಿಭೂಷಣ ಪುರಸ್ಕೃತ ಬೆಂಗಳೂರು ಐಐಎಸ್‌ಸಿಯ ಗೋವಿಂದರಾಜನ್ ಪದ್ಮನಾಭನ್ ಅವರಿಗೆ ಚೊಚ್ಚಲ ವಿಜ್ಞಾನ ರತ್ನ ಪುರಸ್ಕಾರ ಪ್ರಕಟಿಸಲಾಗಿದೆ. ಜೊತೆಗೆ ಚಂದ್ರಯಾನ-3ರ ಯಶಸ್ಸಿಗೆ ಶ್ರಮಿಸಿದ ವಿಜ್ಞಾನಿಗಳು ಮತ್ತು ಅದರ ತಂಡಕ್ಕೆ ಅತ್ಯುತ್ತಮ ವಿಜ್ಞಾನ ತಂಡ ಪುರಸ್ಕಾರ ಪ್ರಕಟಿಸಲಾಗಿದೆ.

ಒಟ್ಟಾರೆ 13 ವಿಜ್ಞಾನ ಶ್ರೀ ಮತ್ತು 18 ವಿಜ್ಞಾನ ಯುವ ಪ್ರಶಸ್ತಿ ಪ್ರಕಟಿಸಲಾಗಿದೆ. ಆ.23ರ ಬಾಹ್ಯಾಕಾಶ ದಿನದಂದು ರಾಷ್ಟ್ರಪತಿ ದ್ರೌಪದಿ ಮುರ್ಮು ಈ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ.



**33 ರಾಷ್ಟ್ರೀಯ ವಿಜ್ಞಾನ ಪುರಸ್ಕಾರ ಪ್ರಕಟ**

**ಯಾವ ದಿನಾಂಕದಂದು ತನ್ನ ಮುಂದಿನ ಭೂ ಪರಿವೀಕ್ಷಣ ಮೈಕ್ರೋ ಉಪಗ್ರಹವನ್ನು ಉಡಾವಣೆ ಮಾಡಲಿದೆ?**

a) ಆಗಸ್ಟ್ 15
b) ಆಗಸ್ಟ್ 29
c) ಸೆಪ್ಟಂಬರ್ 5
d) ಅಕ್ಟೋಬರ್ 11

**ಉತ್ತರ: a)**

# ಆ.15ರಂದು ಇಸ್ರೋದಿಂದ ಉಪಗ್ರಹ ಉಡಾವಣೆ

**ಹೊಸದಿಲ್ಲಿ:** ಮುಂಬರುವ ಸ್ವಾತಂತ್ರ್ಯ ದಿನಾಚರಣೆಯಂದು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ಇಸ್ರೊ) ಶ್ರೀಹರಿಕೋಟಾದ ಸತೀಶ್ ಧವನ್ ಸ್ಪೇಸ್ ಕೇಂದ್ರದಿಂದ ಭೂ ಪರಿವೀಕ್ಷಣಾ ಮೈಕ್ರೊ ಉಪಗ್ರಹ 'ಇಒಎಸ್–08' ಉಡಾವಣೆ ಮಾಡಲಿದೆ. ಇದು ಇಸ್ರೊದ ಸಣ್ಣಗಾತ್ರದ ಉಡಾವಣೆ ವಾಹನಗಳ(ಎಸ್‌ಎಸ್‌ಎಲ್‌ವಿ) ಪೈಕಿ ಮೂರನೇ ಹಾಗೂ ಅಂತಿಮ ಉಡಾವಣೆಯಾಗಿದೆ. 175.5 ಕೆ.ಜಿ ತೂಕದ ಉಪಗ್ರಹವು ಮೂರು ಪೇಲೋಡ್‌ಗಳನ್ನು ಹೊತ್ತು ಬಾಹ್ಯಾಕಾಶಕ್ಕೆ ಚಿಮ್ಮಲಿದ್ದು, ಒಂದು ವರ್ಷದವರೆಗೆ ಉಪಗ್ರಹವು ಕಾರ್ಯನಿರ್ವಹಿಸಲಿದೆ. ಈ ವೇಳೆ ಉಪಗ್ರಹವು ಭೂಮಿಯ ಕೆಳಮಟ್ಟದ ಕಕ್ಷೆಯಲ್ಲಿ ಸುತ್ತಾಡುತ್ತ ವಿಪತ್ತು ನಿರ್ವಹಣೆಯಲ್ಲಿ ಮಣ್ಣಿನ ತೇವಾಂಶದ ಕುರಿತು ಅಧ್ಯಯನಕ್ಕೆ ನೆರವಾಗಲಿದೆ ಎಂದು ತಿಳಿದುಬಂದಿದೆ. 2022ರ ಆಗಸ್ಟ್ ಮತ್ತು 2023ರ ಫೆಬ್ರವರಿಯಲ್ಲಿ ಇಒಎಸ್–2 ಹಾಗೂ ಇಒಎಸ್–7 ಉಪಗ್ರಹಗಳನ್ನು ಕ್ರಮವಾಗಿ ಉಡಾವಣೆ ಮಾಡಲಾಗಿತ್ತು.



**ಇತ್ತೀಚೆಗೆ ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಯಾವ ಕುಸ್ತಿಪಟು ತೂಕದ ಕಾರಣದಿಂದ ಒಲಿಂಪಿಕ್ಸ್ ನಿಂದ ಅನರ್ಹ ಗೊಂಡಿದ್ದಾರೆ?**

a) ಲಕ್ಷ್ಯ ಸೇನ್
b) ವಿನೇಶ ಪೊಗಟ್
c) ದೀಪಾ ಕರ್ಮಾಕರ್
d) ನೀರಜ್ ಚೋಪ್ರಾ

**ಉತ್ತರ: b)**



ಹತ್ತು ಬಾರಿ ವಿಶ್ವ ಚಾಂಪಿಯನ್, ನಾಲ್ಕು ಸಾರಿ ಒಲಿಂಪಿಕ್ ಚಾಂಪಿಯನ್ ಜಪಾನ್‌ನ ಫ್ರೀಸ್ಟೈಲ್ ಕುಸ್ತಿಪಟು ಕೌರಿ ಇಚೋ ಅವರನ್ನು ಸ್ಫೂರ್ತಿಯಾಗಿಸಿಕೊಂಡ ಕುಸ್ತಿಪಟು ವಿನೇಶ್ ಫೋಗಟ್ ಬಗ್ಗೆ ಇಡೀ ಜಗತ್ತು ಮಾತಾಡುತ್ತಿದೆ. ಇಚೋ ಹಾದಿಯಲ್ಲೇ ಬೆಳೆದು ಚೊಚ್ಚಲ ಒಲಿಂಪಿಕ್ಸ್ ಚಿನ್ನದ ಪದಕ ಗೆಲ್ಲುವ ಹೊಸ್ತಿಲಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷ ಪ್ರಮಾದಕ್ಕೆ ಬಲಿಪಶುವಾದ ದುರಂತವೊಂದು ನಡೆದು ಹೋಗಿದೆ.

# ಫೋಗಟ್ SHOCK

## ಕಾರ್ಮೋಡಗಳ ನಡುವಿನ ಕೋಲ್ಮಿಂಚು

• ಮಂಜುನಾಥ ಕೆ. ಜಾಟಗೆರೆ

ದೇಹ ತೂಕ 50 ಕೆ.ಜಿ. ದಾಟಿ 100 ಗ್ರಾಮಿನಷ್ಟು ಹೆಚ್ಚಾಯಿತೆಂದು ಒಲಿಂಪಿಕ್ ತುತ್ತತುದಿ ತಲುಪಿದ್ದ ಭಾರತದ ಮಹಿಳಾ ಕುಸ್ತಿಪಟು ವಿನೇಶ್ ಫೋಗಟ್ ಅವರನ್ನು ಅನರ್ಹಗೊಳಿಸಿ ಹೊರ ಕಳಿಸಲಾಗಿದೆ. ಕಠಿಣ ಸವಾಲುಗಳನ್ನು ದಾಟಿ ಪ್ಯಾರಿಸ್ ಒಲಿಂಪಿಕ್ಸ್ ಅಂಗಳದಲ್ಲಿ ಭಾರತದ ಕೀರ್ತಿ ಪತಾಕೆ ಹಾರಿಸುವ ಹುಮ್ಮಸ್ಸಿನಲ್ಲಿದ್ದ ವಿನೇಶ್ ಆಘಾತಗೊಂಡಿದ್ದಾರೆ. ಚೊಚ್ಚಲ ಒಲಿಂಪಿಕ್ಸ್ ಪದಕ ಗೆಲ್ಲುವ ಸುವರ್ಣಾವಕಾಶವನ್ನೂ ಅವರು ಕಳೆದುಕೊಂಡಿದ್ದಾರೆ.

ಈ ಬೆಳವಣಿಗೆ ರಾತ್ರಿ ಬೆಳಗಾಗುವುದರಲ್ಲಿ ಕೋಟ್ಯಂತರ ಭಾರತೀಯರನ್ನು ದುಃಖಿಸುವಂತೆ ಮಾಡಿದೆ. ಚಿನ್ನ ಬಂಗಾರವಾಗಲಿ ಎಂದು ಆಶಿಸಿದ್ದವರು ಅನರ್ಹತೆಯ ಸುದ್ದಿ ಕೇಳಿ ಬೆಚ್ಚಿಬಿದ್ದಿದ್ದಾರೆ. ಹಾಗೆಯೇ ದೂಷಣೆಯನ್ನು ಮಾಡಿದ್ದಾರೆ. ಇದೆಲ್ಲದರ ನಡುವೆಯೂ 29 ವರ್ಷದ ಹರಿಯಾಣದ ಕುಸ್ತಿಪಟು ವಿನೇಶ್ ಫೋಗಟ್ ಅವರ ಹೋರಾಟ, ಒಲಿಂಪಿಕ್‌ನ ಭಾರತೀಯ ಇತಿಹಾಸದಲ್ಲಿ ಅಚ್ಚಳಿಯದೆ ಉಳಿಯಲಿದೆ.

ಫೈನಲ್‌ಗೆ ಅರ್ಹತೆ ಗಳಿಸುವ ಮುನ್ನ ಅವರು ಎದುರಿಸಿದ ಸವಾಲು, ಮೆಟ್ಟಿನಿಂತ ಒತ್ತಡ ನೂರಾರು. ಅಖಾಡದಲ್ಲೂ ಹಾಗೂ ಅದರಾಚೆಗೂ ಅವರ ಹೋರಾಟ ನಿರಂತರ. ಕಳೆದ ವರ್ಷ ಲೈಂಗಿಕ ದೌರ್ಜನ್ಯ ಆರೋಪ ಎದುರಿಸಿದ ಬ್ರಿಜ್ ಭೂಷಣ್ ವಿರುದ್ಧ ನಡೆದ ಪ್ರತಿಭಟನೆಯಲ್ಲಿ ಮುಂಚೂಣಿಯಲ್ಲಿದ್ದ ವಿನೇಶ್, ಸೂಕ್ತ ಅಭ್ಯಾಸ ನಡೆಸಲು ಸಾಧ್ಯವಾಗಿರಲಿಲ್ಲ. ಇದರ ಮಧ್ಯೆಯೇ ಮಂಡಿ ಶಸ್ತ್ರಚಿಕಿತ್ಸೆಗೆ ಒಳಗಾದ ಅವರು, ಪ್ಯಾರಿಸ್ ಕೂಟದ ವೇಳೆಗೆ ಚೇತರಿಸಿಕೊಂಡಿದ್ದರು.

ಕಳೆದ 5 ವರ್ಷಗಳಿಂದ 53 ಕೆ.ಜಿ ವಿಭಾಗವನ್ನು ಪ್ರತಿನಿಧಿಸುತ್ತಿದ್ದ ಅವರು, ಪ್ಯಾರಿಸ್ ಕೂಟದಲ್ಲಿ ಅದೇ ವಿಭಾಗವನ್ನು ಪ್ರತಿನಿಧಿಸಲು ಸಜ್ಜಾಗಿದ್ದರು. ದುರದೃಷ್ಟವಶಾತ್ ಈ ತೂಕ ವಿಭಾಗದಲ್ಲಿ ಅಂತಿಮ್ ಪಂಘಾಲ್ ಪ್ಯಾರಿಸ್ ಕೂಟಕ್ಕೆ ಅರ್ಹತೆ ಪಡೆದ ಕಾರಣ ಕೋಟಾ ಸ್ಥಾನದಲ್ಲಿ ಅನಿವಾರ್ಯವಾಗಿ 50 ಕೆ.ಜಿ ವಿಭಾಗವನ್ನು ಪ್ರತಿನಿಧಿಸಬೇಕಾಯಿತು. ಇದನ್ನು ಸಾಧಿಸಲು ಅವರು ನಡೆಸಿದ ಕಸರತ್ತು ಅಷ್ಟಿಷ್ಟಲ್ಲ, ಫೈನಲ್‌ಗೂ ಮುನ್ನ ಅವರು ಅನರ್ಹಗೊಳ್ಳಲು ತೂಕದಲ್ಲಿನ ಬದಲಾವಣೆಯೇ ಮೂಲ ಕಾರಣಗಳಲ್ಲಿ ಒಂದು.

ಅನರ್ಹಗೊಳ್ಳುವ ಮುನ್ನ ಒಲಿಂಪಿಕ್ಸ್‌ನಲ್ಲಿ ಫೈನಲ್ ಪ್ರವೇಶಿಸಿ ಈ ಸಾಧನೆ ಮಾಡಿದ ದೇಶದ ಮೊದಲ ಮಹಿಳಾ ಕುಸ್ತಿಪಟು ಎಂಬ ದಾಖಲೆಯೊಂದಿಗೆ ಜಾಗತಿಕ ಮನ್ನಣೆ ಪಡೆದಿದ್ದಾರೆ ವಿನೇಶ್. ಪ್ರಿ ಕ್ವಾರ್ಟರ್‌ಫೈನಲ್‌ನಲ್ಲಿ ನಾಲ್ಕು ಬಾರಿಯ ವಿಶ್ವ ಚಾಂಪಿಯನ್ ಹಾಗೂ ಕಳೆದ ಬಾರಿಯ ಚಿನ್ನದ ಪದಕ ವಿಜೇತೆ ಜಪಾನ್‌ನ ಯುಯಿ ಸುಸಾಕಿ ವಿರುದ್ಧ 3-2 ಅಂತರದಲ್ಲಿ ಗೆದ್ದು ಇತಿಹಾಸ ಸೃಷ್ಟಿಸಿದರು. ಈ ಪಂದ್ಯಕ್ಕೂ ಮುನ್ನ 82-0 ಅಂತರದಲ್ಲಿ ವಿಜಯ ಸಾಧಿಸಿದ್ದ ಸುಸಾಕಿ ಮೊದಲ ಬಾರಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರತೀಯ ಕುಸ್ತಿಪಟು ವಿರುದ್ಧ ಸೋಲನುಭವಿಸಿದರು.

manjunath.gowda@timesofindia.com




### ವಿವಿಧ ತೂಕ ವಿಭಾಗಗಳಲ್ಲಿ ಸ್ಪರ್ಧೆ

ಬಹುತೇಕ ಕುಸ್ತಿಪಟುಗಳು ತಮ್ಮ ವೃತ್ತಿ ಜೀವನದಲ್ಲಿ ಒಂದು ಅಥವಾ ಎರಡು ವಿಭಾಗಗಳಲ್ಲಿ ಸ್ಪರ್ಧಿಸುತ್ತಾರೆ. ಆದರೆ ವಿನೇಶ್ ಫೋಗಟ್, ವೃತ್ತಿ ಜೀವನದುದ್ದಕ್ಕೂ ಭಿನ್ನ ತೂಕ ವಿಭಾಗದಲ್ಲಿ ತಮ್ಮ ಸಾಮರ್ಥ್ಯವನ್ನು ಒರೆಗೆ ಹಚ್ಚಿದರು. 2016ರ ರಿಯೊ ಒಲಿಂಪಿಕ್ಸ್ ಗೇಮ್ಸ್‌ನಲ್ಲಿ 48 ಕೆ.ಜಿ ವಿಭಾಗವನ್ನು ಪ್ರತಿನಿಧಿಸಿದ ಅವರು, 2018ರ ಏಷ್ಯನ್ ಗೇಮ್ಸ್‌ನಲ್ಲಿ 50 ಕೆ.ಜಿ ವಿಭಾಗದಲ್ಲಿ ಕಣಕ್ಕಿಳಿದಿದ್ದರು. 2018ರಲ್ಲಿನ ನಿಯಮ ಬದಲಾವಣೆಯಿಂದಾಗಿ 2019ರಿಂದ 53 ಕೆ.ಜಿ. ವಿಭಾಗದತ್ತ ವಾಲಿದರು. ಅದಕ್ಕಾಗಿಯೇ ಸಾಕಷ್ಟು ಕಸರತ್ತು ನಡೆಸಿದರು. ಆದರೆ ಪ್ಯಾರಿಸ್ ಒಲಿಂಪಿಕ್‌ನಲ್ಲಿ ಅನಿವಾರ್ಯವಾಗಿ 50 ಕೆ.ಜಿ. ವಿಭಾಗದ ಫ್ರಿಸ್ಟೈಲ್ ವಿಭಾಗದಲ್ಲಿ ಸ್ಪರ್ಧಿಸಬೇಕಾಯಿತು.

### ಕುಸ್ತಿಯೇ ಹೊದಿಕೆ...

ಭಾರತದಲ್ಲಿ ಕುಸ್ತಿ ಶ್ರೀಮಂತಿಕೆಯನ್ನೇ ಹೊಂದಿರುವ ಕುಟುಂಬದಿಂದ ಬಂದಿರುವ ವಿನೇಶ್, ದೇಶವೇ ಹೆಮ್ಮೆ ಪಡುವ ಸಾಧನೆ ಮೆರೆದಿದ್ದಾರೆ. ತಮ್ಮ 8ನೇ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ ವಿನೇಶ್, ಸಹೋದರಿ ಪ್ರಿಯಾಂಕಾ ಜತೆ ಚಿಕ್ಕಪ್ಪ ಮಹಾವೀರ್ ಸಿಂಗ್ ಫೋಗಟ್ ಆರೈಕೆಯಲ್ಲಿ ಬೆಳೆದರು. ಮಹಾವೀರ್ ತನ್ನ ನಾಲ್ವರು ಪುತ್ರಿಯರಾದ ಗೀತಾ, ಬಬಿತಾ, ಸಂಗೀತಾ ಮತ್ತು ರಿತು ಅವರೊಂದಿಗೆ ಇವರಿಬ್ಬರಿಗೂ ಕುಸ್ತಿಯನ್ನು ಕಲಿಸಿದರು. ಈ ಎಲ್ಲಾ ಆರು ಸೋದರ ಸಂಬಂಧಿಗಳು ಕ್ರೀಡೆಯಲ್ಲಿ ಭಾರತವನ್ನು ಪ್ರತಿನಿಧಿಸಿರುವುದು ವಿಶೇಷ. ''ಕುಸ್ತಿ ತರಬೇತಿಗಾಗಿ ಚಿಕ್ಕಪ್ಪ ಬೆಳಗ್ಗೆ 4 ಗಂಟೆಗೆ ನಮ್ಮನ್ನು ಎಬ್ಬಿಸುತ್ತಿದ್ದರು. ನಂತರ ನಿತ್ಯ 6 ಗಂಟೆ ತರಬೇತಿ ನೀಡುತ್ತಿದ್ದರು. ಕುಸ್ತಿಯಲ್ಲಿ ಉತ್ತಮ ಪ್ರದರ್ಶನ ನೀಡುತ್ತಿದ್ದರೂ ಅದನ್ನು ನಾನು ಮುಂದುವರಿಸಲು ಬಯಸಿರಲಿಲ್ಲ. ಆದರೆ ಚಿಕ್ಕಪ್ಪ ಒಲಿಂಪಿಕ್ ಪದಕ ಬಯಸಿದ್ದರು. ಒಲಿಂಪಿಕ್ಸ್ ಎಂದರೆ ಏನು? ಎನ್ನುತ್ತಿದ್ದ ನಾನು ನಂತರ ಆ ಕನಸು ಈಡೇರಿಸುವ ನಿಟ್ಟಿನಲ್ಲಿ ಸಕ್ರಿಯಗೊಂಡೆ,'' ಎಂದು ವಿನೇಶ್ ಹೇಳಿರುವುದು ಅವರ ಹೋರಾಟದ ಹಾದಿಯನ್ನು ಬಿಂಬಿಸುತ್ತದೆ.




### 'ಕುಸ್ತಿ ಆಯ್ಕೆ' ತಂದೆಯ ಕನಸು

ಕನಸೇ ಚಿಗುರೊಡೆಯದ ವಯಸ್ಸಿನಲ್ಲಿ ವಿನೇಶ್‌ಗೆ, ಭೂ ವಿವಾದದಲ್ಲಿ ಹತ್ಯೆಯಾದ ತಂದೆಯನ್ನು ನೋಡುವಂತ ಪರಿಸ್ಥಿತಿ ಎದುರಾಯಿತು. ಮಹಾವೀರ್ ಸಿಂಗ್ ಕುಟುಂಬದ ಹೆಣ್ಣು ಮಕ್ಕಳಂತೆ ತಮ್ಮ ಮಕ್ಕಳು ಕುಸ್ತಿಪಟುವಾಗಬೇಕೆಂದು ಅವರ ತಂದೆ ಆಶಿಸಿದ್ದರು. ದುರ್ದೈವದ ಸಂಗತಿ ಎಂದರೆ ಆ ಕನಸನ್ನು ಪೋಷಿಸಲು ಅವರೇ ಇರಲಿಲ್ಲ, ಸಹೋದರನ ಆಸೆಯಂತೆ ತನ್ನ ಮಕ್ಕಳೊಂದಿಗೆ ಕುಸ್ತಿ ತರಬೇತಿ ನೀಡಿದ ಮಹಾವೀರ್, ವಿನೇಶ್ ಹಾಗೂ ಸಹೋದರಿಗೆ ಎಲ್ಲವೂ ಆದರು. ತಂದೆಯ ಕನಸಿನಂತೆ ಕುಸ್ತಿಯನ್ನು ಆಯ್ಕೆ ಮಾಡಿಕೊಂಡ ವಿನೇಶ್, ಕೇವಲ ಕುಟುಂಬಕ್ಕಲ್ಲದೆ ರಾಜ್ಯ ಹಾಗೂ ದೇಶಕ್ಕೆ ಕೀರ್ತಿ ತಂದರು. ''ನನ್ನ ತಂದೆ ಮೃತಪಟ್ಟಾಗ ಅವರ ನಷ್ಟದ ಬಗ್ಗೆ ನಮಗೆ ಅರಿವಾಗಲಿಲ್ಲ, ಆದರೆ ತಾಯಿ ದುಃಖಿಸುತ್ತಿದ್ದಾಗಲೆಲ್ಲ ಇದರ ನೆನಪಾಗುತ್ತಿತ್ತು. ನಂತರ ಕ್ರಮೇಣ ಅದರ ಪರಿಣಾಮ ಬೀರಿತು. ಸ್ಪರ್ಧೆಯ ಸಮಯದಲ್ಲಿ ಅವರ ಉಪಸ್ಥಿತಿ ಇರಬೇಕೆಂದು ಹಲವು ಬಾರಿ ಬಯಸಿದ್ದೇನೆ,'' ಎಂದು ಸ್ವತಃ ವಿನೇಶ್ ಹೇಳಿಕೊಂಡಿದ್ದಾರೆ.



## ರಾಜ ಪರ್ವ ಇದು ಯಾವ ರಾಜ್ಯದ ಪ್ರಸಿದ್ಧ ಉತ್ಸವವಾಗಿದೆ?

a) ಮಣಿಪುರ
b) ಒಡಿಸ್ಸಾ
c) ಉತ್ತರಖಂಡ
d) ಹಿಮಾಚಲ ಪ್ರದೇಶ

**ಉತ್ತರ: b)**

2) ರಾಜಾ ಪರ್ಬಾ ಇದು ಯಾವ ರಾಜ್ಯದ ಪ್ರಸಿದ್ಧ ಉತ್ಸವ?

ಎ) ಮಣಿಪುರ ಬಿ) ಒಡಿಶಾ

ಸಿ) ಉತ್ತರಾಖಂಡ ಡಿ) ಹಿಮಾಚಲಪ್ರದೇಶ

ಉತ್ತರ: ಬಿ) ಒಡಿಶಾ

- **ವಿವರಣೆ:** ಒಡಿಶಾದಲ್ಲಿ ಜೂನ್ ತಿಂಗಳ ಮಧ್ಯಭಾಗದಲ್ಲಿ ರಾಜಾ ಪರ್ಬಾ ಉತ್ಸವ ನಡೆಯುತ್ತದೆ. ಮಾನ್ಸೂನ್ ಬರುತ್ತಿದ್ದಂತೆ ಕೃಷಿ ಚಟುವಟಿಕೆಗಳಿಗೆ ಭೂಮಿ ಸಜ್ಜಾಗುತ್ತಿರುವ ಸುಸಂದರ್ಭವೆಂದು ಈ ಉತ್ಸವ ಆಚರಣೆಯಾಗುತ್ತಿದೆ.
- ರಾಜಾ ಪರ್ಬಾವನ್ನು ಮಿಥುನ ಸಂಕ್ರಾಂತಿ ಎಂದೂ ಕರೆಯುತ್ತಾರೆ. ಈ ವರ್ಷ ಒಡಿಶಾ ಪ್ರವಾಸೋದ್ಯಮ ಇಲಾಖೆ ರಾಜಾ ಪರ್ಬಾ ಉತ್ಸವದ ವೇಳೆ 'ಪಿಥಾ ಆನ್ ವೀಲ್ಸ್' ಎಂಬ ವಿಶೇಷ ಕಾರ್ಯಕ್ರಮವನ್ನು ಸಹ ಆಯೋಜಿಸಿತ್ತು.

## ಕನ್ನಡಕ್ಕೆ ಐದನೇ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟವರು ಯಾರು?

a) ಶಿವರಾಮ್ ಕಾರಂತ್
b) ವಿನಾಯಕ ಕೃಷ್ಣ ಗೋಕಾಕ್
c) ಅನಂತಮೂರ್ತಿ
d) ಚಂದ್ರಶೇಖರ್ ಕಂಬಾರ್

**ಉತ್ತರ:-a)**

ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಪುರುಷರ ಜಾಲಿಯನ್ ತ್ರೋ ನಲ್ಲಿ ಬೆಳ್ಳಿ ಪದಕವನ್ನು ಗೆದ್ದವರು ಯಾರು?

a) ನೀರಜ್ ಚೋಪ್ರಾ
b) ಅರ್ಷದ್ ನದೀಮ್
c) ಜಾನಿ ವೆಬ್ಬರ್
d) ಅಲೆಕ್ಸಾಂಡರ್ ನಾನಿನ್

ಉತ್ತರ:-a)

## ಪಾಕಿಸ್ತಾನದ ಅರ್ಷದ್ ನದೀಂಗೆ ಚಿನ್ನ

# ನೀರಜ್ ಬೆಳ್ಳಿ ಬೆಡಗು



PARIS 2024



ಬೆಳ್ಳಿ

**89.45** ಮೀ.
ನೀರಜ್ ಚೋಪ್ರಾ
(ಭಾರತ)

ಪ್ಯಾರಿಸ್ (ಪಿಟಿಐ/ಎಎಫ್‌ಪಿ): ಭಾರತದ ನೀರಜ್ ಚೋಪ್ರಾ ಪ್ಯಾರಿಸ್ ಒಲಿಂಪಿಕ್ಸ್‌ನಲ್ಲಿ ಪುರುಷರ ಜಾವೆಲಿನ್ ಥ್ರೋನಲ್ಲಿ ಬೆಳ್ಳಿ ಪದಕ ಜಯಿಸಿದರು. ಪಾಕಿಸ್ತಾನದ ಅರ್ಷದ್ ನದೀಂ ಚಿನ್ನ ಗೆದ್ದರು.

ಒಲಿಂಪಿಕ್ ಕೂಟದಲ್ಲಿ ಎರಡು ಪದಕಗಳನ್ನು ಗೆದ್ದ ಭಾರತದ ಮೊದಲ ಅಥ್ಲೀಟ್ ಎಂಬ ಹೆಗ್ಗಳಿಕೆಗೆ ನೀರಜ್ ಪಾತ್ರರಾದರು. ಈ ಒಲಿಂಪಿಕ್ಸ್‌ನಲ್ಲಿ ಭಾರತಕ್ಕೆ ಒಲಿದ ಒಟ್ಟಾರೆ ಐದನೇ ಪದಕವಾಗಿದೆ. ಅಲ್ಲದೇ ಇದು ಮೊದಲ ಬೆಳ್ಳಿಯಾಗಿದ್ದು, ಉಳಿದ ನಾಲ್ಕು ಕಂಚಿನ ಪದಕಗಳಾಗಿವೆ.

2020ರ ಟೋಕಿಯೊ ಒಲಿಂಪಿಕ್ಸ್‌ನಲ್ಲಿ ಚಿನ್ನದ ಪದಕ ಜಯಿಸಿದ್ದ ನೀರಜ್ ಇಲ್ಲಿಯೂ ಅದೇ ಸಾಧನೆ ಮಾಡುವ ಆತ್ಮವಿಶ್ವಾಸದಲ್ಲಿದ್ದರು. ಆದರೆ ಗುರುವಾರ ರಾತ್ರಿ ಅವರಿಗೆ ಲಯ ಕೈಕೊಟ್ಟಿತು. ಆರು ಅವಕಾಶಗಳಲ್ಲಿ ಅವರು ಐದರಲ್ಲಿ ಫೌಲ್ ಮಾಡಿದರು. ಒಂದರಲ್ಲಿ ಮಾತ್ರ 89.45 ಮೀಟರ್ಸ್ ದೂರ ಜಾವೆಲಿನ್ ಥ್ರೋ ಮಾಡಿದರು. ಆದರೆ, ನೀರಜ್ ಅವರ 'ಸ್ನೇಹಿತ' ನದೀಂ ಅವರಿಗೆ ಅದೃಷ್ಟ ಜೊತೆಗೂಡಿತು. ಪಾಕಿಸ್ತಾನಕ್ಕೆ ಇದು ಮೊದಲ ಒಲಿಂಪಿಕ್ ಚಿನ್ನದ ಪದಕವಾಗಿದೆ.






**92.97** ಮೀ
ಅರ್ಷದ್ ನದೀಂ (ಪಾಕಿಸ್ತಾನ)
ಒಲಿಂಪಿಕ್ ದಾಖಲೆ






**88.54** ಮೀ
ಆ್ಯಂಡರ್ಸನ್ ಪೀಟರ್
(ಗ್ರೆನೆಡಾ)

**ಜಗತ್ತಿನ ಬೃಹತ್ ಅನಿಲ ನಿಕ್ಷೇಪವನ್ನು ಯಾವ ದೇಶ ಇತ್ತೀಚಿಗೆ ಖಚಿತಪಡಿಸಿದೆ?**

a) ಚೀನಾ
b) ಭಾರತ
c) ಅಮೆರಿಕ
d) ಕೆನಡಾ

**ಸರಿಯಾದ ಉತ್ತರ: a)**

# ಜಗತ್ತಿನ ಬೃಹತ್ ಅನಿಲ ನಿಕ್ಷೇಪ ಪತ್ತೆ: ಖಚಿತಪಡಿಸಿದ ಚೀನಾ

ಬೀಜಿಂಗ್(ಪಿಟಿಐ): ವಿವಾದಿತ ದಕ್ಷಿಣ ಚೀನಾ ಸಮುದ್ರದಲ್ಲಿ ಜಗತ್ತಿನ ಅತಿ ದೊಡ್ಡ ನೈಸರ್ಗಿಕ ಅನಿಲ ನಿಕ್ಷೇಪ ಪತ್ತೆ ಮಾಡಲಾಗಿದೆ ಎಂದು ಚೀನಾ ಹೇಳಿದೆ.

ದಕ್ಷಿಣ ಚೀನಾ ಸಮುದ್ರ ಪ್ರದೇಶ ವಿಚಾರವಾಗಿ ಚೀನಾ ಮತ್ತು ಇತರೆ ದೇಶಗಳ ನಡುವೆ ಈಗಾಗಲೇ ರಾಜತಾಂತ್ರಿಕ ಮತ್ತು ಸೇನೆ ಮಟ್ಟದಲ್ಲಿ ಸಂಘರ್ಷ ನಡೆಯುತ್ತಿದೆ. ಈಗ, ನೈಸರ್ಗಿಕ ಅನಿಲ ನಿಕ್ಷೇಪ ಪತ್ತೆಯಿಂದಾಗಿ ಈ ಸಂಘರ್ಷ ಮತ್ತಷ್ಟು ಉಲ್ಬಣಿಸಲಿದೆ ಎಂದು ನಿರೀಕ್ಷಿಸಲಾಗಿದೆ.

'ಲಿಂಗ್‌ಶುಯಿ 36–1' ಎಂದು ಗುರುತಿಸಲಾಗುವ, ಆಳವಿಲ್ಲದ ಈ ಪ್ರದೇಶದಲ್ಲಿ 10 ಸಾವಿರ ಕೋಟಿ ಘನ ಮೀಟರ್‌ಗಳಷ್ಟು ಅನಿಲ ಪತ್ತೆಯಾಗಿದೆ ಎಂದು ಚೀನಾದ 'ನ್ಯಾಷನಲ್ ಆಫ್‌ಶೋರ್ ಆಯಿಲ್ ಕೋ–ಆಪರೇಷನ್' (ಸಿಎನ್‌ಒಒಸಿ) ಎಂಬ ಸಂಸ್ಥೆ ಬುಧವಾರ ಘೋಷಿಸಿದೆ.

ಚೀನಾದ ಹೈನನ್ ಪ್ರಾಂತ್ಯದ ಆಗ್ನೇಯ ಭಾಗದ ಸಮುದ್ರದಲ್ಲಿ ಈ ನಿಕ್ಷೇಪ ಪತ್ತೆಯಾಗಿದೆ ಎಂದು ಸಿಎನ್‌ಒಒಸಿ ತಿಳಿಸಿದೆ. ಆದರೆ, ಈ ಅನಿಲ ನಿಕ್ಷೇಪ ಇರುವ ಪ್ರದೇಶವು ವಿವಾದಿತ ದಕ್ಷಿಣ ಚೀನಾ ಸಮುದ್ರ ವ್ಯಾಪ್ತಿಯೊಳಗೆ ಇದೆಯೋ ಅಥವಾ ಇಲ್ಲವೋ ಎಂಬ ಬಗ್ಗೆ ಅದು ಯಾವುದೇ ಮಾಹಿತಿ ನೀಡಿಲ್ಲ.

**ಜಟಾಪಟಿ:** ದಕ್ಷಿಣ ಚೀನಾ ಸಮುದ್ರ (ಎಸ್‌ಸಿಎಸ್) ಪ್ರದೇಶ ವಿಚಾರವಾಗಿ ಹಲವು ದೇಶಗಳು ಚೀನಾದೊಂದಿಗೆ ಸಂಘರ್ಷ ನಡೆಸುತ್ತಲೇ ಇವೆ. ಇದು ತನಗೆ ಸೇರಿದ್ದು ಎಂದು ಹೇಳುತ್ತಲೇ ಇರುವ ಚೀನಾ, ಈ ಪ್ರದೇಶದಲ್ಲಿ ತನ್ನ ಸೇನಾ ಸಾಮರ್ಥ್ಯವನ್ನು ವೃದ್ಧಿಸುತ್ತಿದೆ.

ಚೀನಾ ವಾದವನ್ನು ವಿರೋಧಿಸುತ್ತಿರುವ, ಫಿಲಿಪ್ಪೀನ್ಸ್, ವಿಯೆಟ್ನಾಂ, ಮಲೇಷ್ಯಾ, ಬ್ರೂನಿ, ತೈವಾನ್ ಎಸ್‌ಸಿಎಸ್ ಮೇಲೆ ತಮಗೂ ಹಕ್ಕಿದೆ ಎನ್ನುತ್ತವೆ. ಅಮೆರಿಕ, ಐರೋಪ್ಯ ಒಕ್ಕೂಟ, ಜಪಾನ್ ಹಾಗೂ ಇತರ ಮಿತ್ರರಾಷ್ಟ್ರಗಳು ಈ ಸಣ್ಣ ದೇಶಗಳ ಬೆಂಬಲಕ್ಕೆ ನಿಂತಿವೆ.

## ಇತ್ತೀಚಿಗೆ ಸುದ್ದಿಯಲ್ಲಿದ್ದ ಪಿ ಆರ್ ಶ್ರೀಜೇಶ್ ಯಾವ ಕ್ರೀಡೆಗೆ ಸಂಬಂಧ ಪಟ್ಟಿದ್ದಾರೆ?

a) ಹಾಕಿ
b) ಬ್ಯಾಡ್ಮಿಂಟನ್
c) ಟೆನಿಸ್
d) ವಾಲಿಬಾಲ್

ಉತ್ತರ: a)

# ಪಿ.ಆರ್. ಶ್ರೀಜೇಶ್ ನಿವೃತ್ತಿ

ನವದೆಹಲಿ: ಸ್ಪೇನ್ ವಿರುದ್ಧ ಗುರುವಾರ ಕಂಚಿನ ಪದಕದ ಪ್ಲೇ ಆಫ್ ಪಂದ್ಯದ ನಂತರ ದಣಿದರೂ, ಪಿ.ಆರ್.ಶ್ರೀಜೇಶ್ ಮುಖದ ತುಂಬಾ ಮಂದಹಾಸ ಮೂಡಿತ್ತು. ತಂಡ ಸತತ ಎರಡನೇ ಬಾರಿ ಕಂಚಿನ ಪದಕ ಗೆದ್ದ ತೃಪ್ತಿಯ ಭಾವದಲ್ಲಿ ಅವರು ನಿವೃತ್ತರಾದರು. ತಂಡದ ಸದಸ್ಯರು ಅವರನ್ನು ಸುತ್ತುವರಿದು ಭುಜದ ಮೇಲೆ ಕುಳ್ಳಿರಿಸಿ ಸಂಭ್ರಮಪಟ್ಟರು.

ಒಲಿಂಪಿಕ್ಸ್ ನನ್ನ ಕೊನೆಯ ಅಂತರರಾಷ್ಟ್ರೀಯ ಹಾಕಿ ಸ್ಪರ್ಧೆ ಎಂದು ಅವರು ಆರಂಭದಲ್ಲೇ ಘೋಷಿಸಿದ್ದರು. ಎರಡು ದಶಕಗಳ ಕಾಲ ಅವರು ಗೋಲ್ ಕೀಪರ್ ಆಗಿ ಭಾರತ ತಂಡದ ಹಲವು ಗೆಲುವುಗಳಿಗೆ ಹೆಗಲು ನೀಡಿದ್ದರು. 2006ರಲ್ಲಿ ತಂಡಕ್ಕೆ ಪದಾರ್ಪಣೆ ಮಾಡಿದಾಗ ಅವರ ವಯಸ್ಸು 18. ಅವರು ಸತತ ನಾಲ್ಕು ಒಲಿಂಪಿಕ್ಸ್ ಗಳಲ್ಲಿ ಆಡಿದ ಮೊದಲ ಗೋಲ್‌ಕೀಪರ್. ಇತ್ತೀಚಿನ ವರ್ಷಗಳಲ್ಲಿ ಕೇರಳದ ಈ ಆಟಗಾರ ಕಿರಿಯ ಆಟಗಾರರಿಗೆ ಮೆಂಟರ್ ರೂಪ ದಲ್ಲೂ ಮಾರ್ಗದರ್ಶನ ನೀಡಿದ್ದಾರೆ. ಪ್ಯಾರಿಸ್ ಒಲಿಂಪಿಕ್ಸ್‌ನಲ್ಲೂ ಅವರು ಹೆಚ್ಚಿನ ಪಂದ್ಯಗಳಲ್ಲಿ ಭಾರತ ತಂಡದ ಗೆಲುವಿನ ರೂವಾರಿಯಾಗಿದ್ದರು.




‘ಈ ಪದಕವನ್ನು ನಾನು ಶ್ರೀಜೇಶ್ ಅವರಿಗೆ ಅರ್ಪಿಸಲು ಬಯಸುತ್ತೇನೆ’ ಎಂದು ಮತ್ತೊಬ್ಬ ಆಟಗಾರ ಹಾಗೂ ಅವರ ದೀರ್ಘಕಾಲದ ಗೆಳೆಯ ಮನ್‌ಪ್ರೀತ್ ‘ಎಕ್ಸ್’ನಲ್ಲಿ ಪೋಸ್ಟ್ ಹಾಕಿದರು.

**ವೈಟ್ ಲಿಫ್ಟಿಂಗ್ 49 ಕೆಜಿ ವಿಭಾಗದಲ್ಲಿ ಭಾಗದಲ್ಲಿ ಮೀರಾಬಾಯಿ ಚಾನು ಅವರು ಯಾವ ಸ್ಥಾನವನ್ನು ಪಡೆದರು?**

a) 1
b) 2
c) 3
d) 4*

**ಉತ್ತರ: d)**

# ಚಾನುಗೆ 4ನೇ ಸ್ಥಾನ!

## ವೇಟ್‌ಲಿಫ್ಟಿಂಗ್: 49 ಕೆ.ಜಿ. ವಿಭಾಗದಲ್ಲಿ ಕೈತಪ್ಪಿದ ಪದಕ

## ಒಲಿಂಪಿಕ್ಸ್‌ನಲ್ಲಿ ಸತತ 2ನೇ ಪದಕ ಗೆಲ್ಲುವ ಕನಸು ಭಗ್ನ

**ಪ್ಯಾರಿಸ್:** 2024ರ ಒಲಿಂಪಿಕ್ಸ್‌ನಲ್ಲಿ ಭಾರತಕ್ಕೆ ಮತ್ತೊಂದು ಪದಕ ಕೈತಪ್ಪಿದೆ. ಮಹಿಳೆಯರ ವೇಟ್‌ಲಿಫ್ಟಿಂಗ್ 49 ಕೆ.ಜಿ. ವಿಭಾಗದಲ್ಲಿ ಮೀರಾಬಾಯಿ ಚಾನು 4ನೇ ಸ್ಥಾನ ಪಡೆದು ನಿರಾಸೆ ಅನುಭವಿಸಿದ್ದಾರೆ. ಆ ಮೂಲಕ ಸತತ 2ನೇ ಒಲಿಂಪಿಕ್ಸ್‌ನಲ್ಲಿ ಪದಕ ಗೆಲ್ಲುವ ಚಾನು ಕನಸು ನುಚ್ಚು ನೂರಾಯಿತು.

ಬುಧವಾರ ಮಧ್ಯರಾತ್ರಿ ನಡೆದ ಸ್ಪರ್ಧೆಯಲ್ಲಿ ಮೀರಾಬಾಯಿ, ಸ್ನ್ಯಾಚ್‌ನಲ್ಲಿ 88 ಕೆ.ಜಿ. ಹಾಗೂ ಕ್ಲೀನ್ ಅಂಡ್ ಜರ್ಕ್‌ನಲ್ಲಿ 111 ಕೆ.ಜಿ. ಸೇರಿ ಒಟ್ಟು 199 ಕೆ.ಜಿ. ಭಾರ ಎತ್ತಿದರು. ಇದರೊಂದಿಗೆ 4ನೇ ಸ್ಥಾನ ಪಡೆದರು.

ಸ್ನ್ಯಾಚ್‌ನ ಮೊದಲ ಯತ್ನದಲ್ಲಿ 85 ಕೆ.ಜಿ. ಭಾರವನ್ನು ಸಲೀಸಾಗಿ ಎತ್ತಿದ ಚಾನು, 2ನೇ ಯತ್ನದಲ್ಲಿ 88 ಕೆ.ಜಿ.ಯನ್ನು ಎತ್ತಲು ವಿಫಲರಾದರು. ಆದರೆ 3ನೇ ಯತ್ನದಲ್ಲಿ 88 ಕೆ.ಜಿ.ಯನ್ನು ಸುಲಭವಾಗಿ ಎತ್ತಿ, ಅಗ್ರ-3ರಲ್ಲಿ ಉಳಿದುಕೊಂಡರು.

ಸ್ನ್ಯಾಚ್‌ನಲ್ಲಿ ರೊಮೇನಿಯಾದ ವ್ಯಾಲೆಂಟೀನಾ 93 ಕೆ.ಜಿ. ಭಾರ ಎತ್ತಿದರೆ, ಚೀನಾದ ರಿಝೀಹುಯಿ ಹೊ 89 ಕೆ.ಜಿ. ಎತ್ತಿ 2ನೇ ಸ್ಥಾನದಲ್ಲಿದ್ದರು.

ಕ್ಲೀನ್ ಅಂಡ್ ಜರ್ಕ್‌ನ ಮೊದಲ ಯತ್ನದಲ್ಲಿ 111 ಕೆ.ಜಿ. ಭಾರ ಎತ್ತುವುದಾಗಿ ನೋಂದಾಯಿಸಿದ್ದ ಚಾನು, ವಿಫಲರಾದರು. ಆದರೆ, 2ನೇ ಯತ್ನದಲ್ಲಿ 111 ಕೆ.ಜಿ.ಯನ್ನು ಯಶಸ್ವಿಯಾಗಿ ಎತ್ತಿ ಮೊದಲ ಸ್ಥಾನ



ತಲುಪಿದರು. ತಮ್ಮ ಪ್ರತಿಸ್ಪರ್ಧಿಗಳು ಹೆಚ್ಚು ಭಾರ ಎತ್ತಿದ ಕಾರಣ, ಚಾನು 3ನೇ ಯತ್ನದಲ್ಲಿ 114 ಕೆ.ಜಿ. ಭಾರ ಎತ್ತಬೇಕಾದ ಅನಿವಾರ್ಯತೆಗೆ ಸಿಲುಕಿದರು. ಆದರೆ ಅವರಿಂದ ಸಾಧ್ಯವಾಗಲಿಲ್ಲ.

ಕ್ಲೀನ್ ಅಂಡ್ ಜರ್ಕ್‌ನಲ್ಲಿ ಒಲಿಂಪಿಕ್ ದಾಖಲೆಯ 117 ಕೆ.ಜಿ. ಸೇರಿ ಒಟ್ಟು 206 ಕೆ.ಜಿ. ಭಾರ ಎತ್ತಿದ ಚೀನಾದ ರಿಝೀಹುಯಿ ಚಿನ್ನದ ಪದಕ ಗೆದ್ದರೆ, ರೊಮೇನಿಯಾದ ವ್ಯಾಲಂಟೀನಾ ಕ್ಲೀನ್ ಅಂಡ್ ಜರ್ಕ್‌ನಲ್ಲಿ 112 ಕೆ.ಜಿ. ಭಾರ ಎತ್ತುವ ಮೂಲಕ ಒಟ್ಟು 205 ಕೆ.ಜಿ.ಯೊಂದಿಗೆ ಬೆಳ್ಳಿ ಪಡೆದರು. ಥಾಯ್ಲೆಂಡ್‌ನ ಸುರೋದ್ಚನಾ ಖಾಂಬಾವೊ (88 ಕೆ.ಜಿ.+ 112 ಕೆ.ಜಿ) ಒಟ್ಟು 200 ಕೆ.ಜಿ. ಭಾರ ಎತ್ತಿ ಕಂಚು ಗಳಿಸಿದರು.

ನಾರ್ವೆ ಚೆಸ್ ಟೂರ್ನಿ ಯಲ್ಲಿ ಚಾಂಪಿಯನ್ ಆದ ಆಟಗಾರ ಯಾರು?

a) ಕಾರುವ
b) ಫಾಂಟ್
c) ಇವನ್ಸ್
d) ಕಾರ್ಲ್ ಸನ್

ಉತ್ತರ: d)

1) ನಾರ್ವೆ ಚೆಸ್ ಟೂರ್ನಿಯಲ್ಲಿ ಚಾಂಪಿಯನ್ ಆದ ಆಟಗಾರನಾರು?

ಎ) ಫ್ಯಾಬಿಯಾನೊ ಕಾರುವಾ ಬಿ) ಗೆಲ್‌ಫಾಂಡ್

ಸಿ) ಇವಾನ್ಸ್ ಹ್ಯೂಜ್

ಡಿ) ಮ್ಯಾಗ್ನಸ್ ಕಾರ್ಲ್‌ಸನ್

ಉತ್ತರ: ಡಿ) ಮ್ಯಾಗ್ನಸ್ ಕಾರ್ಲ್‌ಸನ್

- **ವಿವರಣೆ:** ವಿಶ್ವದ ಅಗ್ರಶ್ರೇಯಾಂಕದ ಆಟಗಾರ ನಾರ್ವೆಯ ಮ್ಯಾಗ್ನಸ್ ಕಾರ್ಲ್‌ಸನ್ ಇತ್ತೀಚೆಗೆ ನಾರ್ವೆ ಚೆಸ್ ಟೂರ್ನಿಯಲ್ಲಿ ಚಾಂಪಿಯನ್ ಆದರು. ಅಂತಿಮಸುತ್ತಿನಲ್ಲಿ ಅಮೆರಿಕದ ಫ್ಯಾಬಿಯಾನೊ ಕಾರುವಾರನ್ನು ಸೋಲಿಸಿ ಒಟ್ಟಾರೆ 17.5 ಅಂಗಗಳಿಸಿ ವಿಜೇತರಾದರು.
- ಮಹಿಳೆಯರ ವಿಭಾಗದಲ್ಲಿ ಚೀನಾದ ವೆಂಜುನ್ ಜು ಅತಿಹೆಚ್ಚು 19 ಅಂಕಗಳೊಂದಿಗೆ ಪ್ರಶಸ್ತಿ ಜಯಿಸಿದರು. ಉಕ್ರೇನ್‌ನ ಆನಾ ಮುಜಿಚಕ್ 16 ಅಂಕಗಿಟ್ಟಿಸಿ ರನ್ನರ್ ಅಪ್ ಸ್ಥಾನ ತಮ್ಮದಾಗಿಸಿಕೊಂಡರು.

**ಪ್ರೊಫೆಷನಲ್ ಗಾಲ್ಫ್ ಟೂರ್ ಆಫ್ ಇಂಡಿಯಾದ ಹೊಸ ಅಧ್ಯಕ್ಷರಾಗಿ ಯಾರು ಆಯ್ಕೆಯಾಗಿದ್ದಾರೆ?**

a) ಕಪಿಲ್ ದೇವ್

b) ದೀಪ ಗುಪ್ತ

c) ಶ್ರೀನಿವಾಸನ

d) ರಾಧಾ ಮೂರ್ತಿ

**ಉತ್ತರ: a)**

5) ಪ್ರೊಫೆಷನಲ್ ಗಾಲ್ಫ್ ಟೂರ್ ಆಫ್ ಇಂಡಿಯಾದ ಹೊಸ ಅಧ್ಯಕ್ಷರಾಗಿ ಯಾರು ಆಯ್ಕೆಯಾಗಿದ್ದಾರೆ?

ಎ) ಕಪಿಲ್‌ದೇವ್

ಬಿ) ಎಚ್.ಆರ್.ಶ್ರೀನಿವಾಸನ್

ಸಿ) ಬಿ.ಎಸ್.ರಾಂಧವಾ ಡಿ) ದೀಪಂ ಗುಪ್ತಾ

ಉತ್ತರ: ಎ) ಕಪಿಲ್‌ದೇವ್

- ವಿವರಣೆ: ಇತ್ತೀಚೆಗೆ ಭಾರತ ಕ್ರಿಕೆಟ್ ತಂಡದ ಮಾಜಿ ನಾಯಕ, ಆಲ್‌ರೌಂಡರ್ ಕಪಿಲ್‌ದೇವ್ ಪ್ರೊಫೆಷನಲ್ ಗಾಲ್ಫ್ ಟೂರ್ ಆಫ್ ಇಂಡಿಯಾದ ಹೊಸ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿದ್ದಾರೆ. ಕ್ರಿಕೆಟ್ ಹೊರತಾಗಿ ಕಪಿಲ್‌ದೇವ್ ಗಾಲ್ಫ್ ಆಟಗಾರನಾಗಿಯೂ ಹೆಸರು ಮಾಡಿದ್ದಾರೆ.

## ಪ್ಯಾರಿಸ್ ಒಲಂಪಿಕ್ಸ್ ನ ಕ್ರೀಡಾಕೂಟದ ಸಮಾರೋಪ ಸಮಾರಂಭದಲ್ಲಿ ಭಾರತದ ಧ್ವಜ ದಾರಿಗಳಾಗಿ ಯಾರು?

a) ಮನು ಬಾಕರ್

b) ನೀರಜ್ ಚೋಪ್ರಾ

c) ಅಮನ್ ಸೆಹ್ರಾವತ್

d) ಸ್ವಪ್ನಿಲ್ ಕುಶಾಲಿ

ಉತ್ತರ:-a)

# ಮನು ಜತೆ ಧ್ವಜಧಾರಿಯಾಗಿ ಶ್ರೀಜೇಶ್

ನಾಳೆ ನಡೆಯಲಿರುವ ಪ್ಯಾರಿಸ್ ಒಲಿಂಪಿಕ್ಸ್ ಕ್ರೀಡಾಕೂಟದ ಸಮಾರೋಪ ಸಮಾರಂಭದಲ್ಲಿ ಕಂಚು ಪದಕ ವಿಜೇತ ಭಾರತ ಹಾಕಿ ತಂಡದ ಗೋಲ್‌ಕೀಪರ್ ಪಿ.ಆರ್. ಶ್ರೀಜೇಶ್ ಶೂಟರ್ ಮನು ಭಾಕರ್ ಅವರೊಂದಿಗೆ ಧ್ವಜಧಾರಿ ಆಗಲಿದ್ದಾರೆ.

ಸುಮಾರು 18 ವರ್ಷಗಳ ಕಾಲ ಭಾರತ ತಂಡದ ಗೋಲ್‌ಕೀಪರ್‌ರಾಗಿ ಕಾರ್ಯ ನಿರ್ವಹಿಸಿದ ಶ್ರೀಜೇಶ್ ಒಲಿಂಪಿಕ್ಸ್ ತಮ್ಮ ಕೊನೆಯ ಕ್ರೀಡಾಕೂಟ ಎಂದಿದ್ದರು. ಸ್ಪೇನ್ ವಿರುದ್ಧ ಕಂಚು ಗೆದ್ದ ನಂತರ ನಿವೃತ್ತಿ ಘೋಷಿಸಿದರು.

ಪ್ಯಾರಿಸ್ 2024 ಒಲಿಂಪಿಕ್ ಕ್ರೀಡೆಗಳಿಗೆ ಮನು ಭಾಕರ್ ಜತೆ ಜಂಟಿಯಾಗಿ ಧ್ವಜಧಾರಿಯಾಗಿ ಪಿ.ಆರ್.ಶ್ರೀಜೇಶ್ ಅವರನ್ನು ನಾಮನಿರ್ದೇಶನ ಮಾಡಲು ಭಾರತ ಒಲಿಂಪಿಕ್ ಸಂಸ್ಥೆ ಸಂತಸಪಡುತ್ತದೆ ಎಂದು ಭಾರತ ಒಲಿಂಪಿಕ್ಸ್ ಸಂಸ್ಥೆ ತಿಳಿಸಿದೆ.

ಶ್ರೀಜೇಶ್‌ಗೆ ಈ ಗೌರವ ಆಯ್ಕೆ ಮಾಡುವ




ಮೊದಲು ಐಒಎ ಅಧ್ಯಕ್ಷೆ ಪಿ.ಟಿ.ಉಷಾ ತಾರಾ ಅಥ್ಲೀಟ್ ನೀರಜ್ ಚೋಪ್ರಾ ಜತೆ ಚರ್ಚಿಸಿದ್ದರು. ನಿವೃತ್ತಿಯಾಗಲಿರುವ ಶ್ರೀಜೇಶ್ ಅವರನ್ನೆ ಧ್ವಜಧಾರಿಯಾಗಿ ನೋಡಲು ಇಷ್ಟಪಡುವುದಾಗಿ ಸ್ವತಃ ನೀರಜ್ ಹೇಳಿದರು. 2 ಕಂಚು ಗೆದ್ದ ಮನು ಭಾಕರ್ ಮಹಿಳಾ ಧ್ವಜಧಾರಿಯಾಗಿ ನಾಮನಿರ್ದೇಶನಗೊಂಡಿದ್ದರು.

**ಕೆಳಗಿನ ಯಾರು 2024ರ ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಕಂಚಿನ ಪದಕವನ್ನು ಗೆದ್ದಿಲ್ಲ?**

a) ಮನು ಬಾಕರ್
b) ನೀರಜ್ ಚೋಪ್ರಾ
c) ಅಮನ್ ಸೆಹ್ರಾವತ್
d) ಸ್ವಪ್ನಿಲ್ ಕುಶಾಲಿ

**ಉತ್ತರ:–b)**

# ಪ್ಯಾರಿಸ್ 2024 ಒಲಿಂಪಿಕ್ಸ್: ಭಾರತದ ಪದಕ ವಿಜೇತರು

ಪ್ಯಾರಿಸ್ 2024 ರ ಒಲಿಂಪಿಕ್ಸ್‌ನಲ್ಲಿ ಭಾರತದ ಪದಕ ವಿಜೇತರು

| ಸಂ. | ಕ್ರೀಡಾಪಟು | ಈವೆಂಟ್ | ಕ್ರೀಡೆ | ಪದಕ |
|---|---|---|---|---|
| 1 | ಮನು ಭಾಕರ್ | ಮಹಿಳೆಯರ 10 ಮೀಟರ್ ಏರ್ ಪಿಸ್ತೂಲ್ | ಶೂಟಿಂಗ್ | ಕಂಚು |
| 2 | ಮನು ಭಾಕರ್-ಸರಬ್ಜೋತ್ ಸಿಂಗ್ | ಮಿಶ್ರ ತಂಡ 10 ಮೀಟರ್ ಏರ್ ಪಿಸ್ತೂಲ್ | ಶೂಟಿಂಗ್ | ಕಂಚು |
| 3 | ಸ್ವಪ್ನಿಲ್ ಕುಸಲೆ | ಪುರುಷರ 50 ಮೀ ರೈಫಲ್ 3 ಸ್ಥಾನಗಳು | ಶೂಟಿಂಗ್ | ಕಂಚು |
| 4 | ಟೀಮ್ ಇಂಡಿಯಾ | ಪುರುಷರ ಈವೆಂಟ್ | ಹಾಕಿ | ಕಂಚು |
| 5 | ನೀರಜ್ ಚೋಪ್ರಾ | ಪುರುಷರ ಜಾವೆಲಿನ್ ಎಸೆತ | ಅಥ್ಲೆಟಿಕ್ಸ್ | ಬೆಳ್ಳಿ |
| 6 | ಅಮನ್ ಸೆಹ್ರಾವತ್ | ಪುರುಷರ ಫ್ರೀಸ್ಟೈಲ್ 57 ಕೆ.ಜಿ | ಕುಸ್ತಿ | ಕಂಚು |

ಇತ್ತೀಚೆಗೆ ನಿಧನರಾದ ಮಾಜಿ ಸಿಇಒ ಸುಸಾನ್ ಸಾಮಾಜಿಕ ಜಾಲತಾಣದ ಮುಖ್ಯಸ್ಥರಾಗಿದ್ದರು?

a) ಫೇಸ್ಬುಕ್
b) ಯುಟ್ಯೂಬ್
c) ಟೆಲಿಗ್ರಾಂ
d) ಇನ್ಸ್ಟಾಗ್ರಾಂ

ಸರಿಯಾದ ಉತ್ತರ: b)

# ಯುಟ್ಯೂಬ್ ಮಾಜಿ ಸಿಇಒ ಸುಸಾನ್ ಸಾವು

## ಶ್ವಾಸಕೋಶ ಕ್ಯಾನ್ಸರ್‌ಗೆ ಬಲಿ

**ವಾಷಿಂಗ್ಟನ್:** 2 ವರ್ಷಗಳಿಂದ ಶ್ವಾಸಕೋಶ ಕ್ಯಾನ್ಸರ್‌ನಿಂದ ಬಳಲುತ್ತಿದ್ದ ಯುಟ್ಯೂಬ್ ಮಾಜಿ ಸಿಇಒ ಸುಸಾನ್ ವೋಜ್ಸಿಕಿ(56) ಶನಿವಾರ ನಿಧನರಾದರು. ಆಲ್ಫಾ ಬೆಟ್ ಮತ್ತು ಗೂಗಲ್ ಸಿಇಒ ಸುಂದರ ಪಿಚ್ಚೈ ಈ ವಿಷಯ ತಿಳಿಸಿದ್ದಾರೆ.



1990ರಲ್ಲಿ ಗೂಗಲ್ ಮೂಲಕ ವೃತ್ತಿ ಜೀವನ ಆರಂಭಿಸಿದ ಸುಸಾನ್, 2014–23 ಅವಧಿ ಯಲ್ಲಿ ಯುಟ್ಯೂಬ್ ಸಿಇಒ ಆಗಿದ್ದರು.

ಫೇಸ್‌ಬುಕ್‌ನಲ್ಲಿ ಪತ್ನಿ ನಿಧನದ ವಿಷಯವನ್ನು ಪತಿ ಡೆನ್ನಿಸ್ ಟ್ರೊಪರ್ ಹಂಚಿಕೊಂಡಿದ್ದಾರೆ. ಜೀವನ ಸಂಗಾತಿ ಸುಸಾನ್ ಅಪ್ರತಿಮ ಪ್ರತಿಭಾವಂತೆ. 26 ವರ್ಷಗಳ ದಾಂಪತ್ಯ ಜೀವನ, 5 ಮಕ್ಕಳ ತಾಯಿಯಾದ ವೋಜ್ಸಿಕಿಯದ್ದು ಬ್ರಿಲಿಯಂಟ್ ಮೈಂಡ್. ಆಕೆ ಬಹಳ ಮಂದಿಯ ಪ್ರೀತಿಯ ವ್ಯಕ್ತಿಯಾಗಿದ್ದಳು ಎಂದು ಉಲ್ಲೇಖಿಸಿದ್ದಾರೆ.

ಇತ್ತೀಚಿಗೆ ಒಲಿಂಪಿಕ್ ಆರ್ಡರ್ ಗೌರವಕ್ಕೆ ಪಾತ್ರರಾದವರು ಯಾರು?

a) ಲಿಯಾಂಡರ್ ಪೀಸ್
b) ಅಭಿನವ್ ಬಿಂದ್ರ
c) ಸಾನಿಯಾ ಮಿರ್ಜಾ
d) ಸೈನಾ ನೆಹವಾಲ್

ಉತ್ತರ: b)

# ಅಭಿನವ್ ಬಿಂದ್ರಾಗೆ ಐಒಸಿ ಒಲಿಂಪಿಕ್ ಆರ್ಡರ್ ಗೌರವ!

## ವಾರ್ಷಿಕ ಸಭೆಯಲ್ಲಿ ಗೌರವ ಪ್ರದಾನ

**ಪ್ಯಾರಿಸ್:** ಒಲಿಂಪಿಕ್ ಕ್ರೀಡಾಕೂಟದ ಪ್ರಚಾರ ಹಾಗೂ ಬೆಳವಣಿಗೆಗೆ ನೀಡಿರುವ ಕೊಡುಗೆಗಳನ್ನು ಪರಿಗಣಿಸಿ ಭಾರತದ ದಿಗ್ಗಜ



ಶೂಟರ್, ಒಲಿಂಪಿಕ್ ಚಿನ್ನ ವಿಜೇತ ಅಭಿನವ್ ಬಿಂದ್ರಾ ಅವರು ಅಂತಾರಾಷ್ಟ್ರೀಯ ಒಲಿಂಪಿಕ್ ಸಮಿತಿ (ಐಒಸಿ) 'ಒಲಿಂಪಿಕ್ ಆರ್ಡರ್' ಗೌರವಕ್ಕೆ ಭಾಜನರಾಗಿದ್ದಾರೆ. ಪ್ಯಾರಿಸ್‌ನಲ್ಲಿ ಶನಿವಾರ ನಡೆದ ಐಒಸಿಯ 142ನೇ ವಾರ್ಷಿಕ ಸಭೆಯಲ್ಲಿ ಐಒಸಿ ಅಧ್ಯಕ್ಷ ಥಾಮಸ್ ಬಾಚ್ ಅವರು ಬಿಂದ್ರಾಗೆ ಈ ಗೌರವವನ್ನು ಪ್ರದಾನ ಮಾಡಿದರು. ಬಿಂದ್ರಾ 2008ರ ಬೀಜಿಂಗ್ ಒಲಿಂಪಿಕ್ಸ್‌ನ ಪುರುಷರ 10 ಮೀ. ಏರ್ ರೈಫಲ್ ಸ್ಪರ್ಧೆಯಲ್ಲಿ ಚಿನ್ನ ಜಯಿಸಿದ್ದರು. 2018ರಿಂದ ಐಒಸಿ ಅಥ್ಲೀಟ್‌ಗಳ ಸಮಿತಿಯ ಸದಸ್ಯರಾಗಿದ್ದಾರೆ.

**ಏನಿದು ಒಲಿಂಪಿಕ್ ಆರ್ಡರ್?:** ಒಲಿಂಪಿಕ್‌ನಲ್ಲಿ ವೈಯಕ್ತಿಕ ಸಾಧನೆ, ಕ್ರೀಡಾಕೂಟದ ಬಗ್ಗೆ ಸಕಾರಾತ್ಮಕ ಪ್ರಚಾರ, ಕ್ರೀಡೆಯ ಅಭಿವೃದ್ಧಿಗೆ ವಿವಿಧ ರೀತಿಗಳಲ್ಲಿ ನೆರವಾಗುವ ವ್ಯಕ್ತಿಗಳಿಗೆ ಐಒಸಿ ಒಲಿಂಪಿಕ್ ಆರ್ಡರ್ ಗೌರವ ನೀಡಲಿದೆ. ಒಲಿಂಪಿಕ್ ಆರ್ಡರ್ ಸಮಿತಿ ಈ ಗೌರವಕ್ಕೆ ಹೆಸರುಗಳನ್ನು ಶಿಫಾರಸು ಮಾಡಲಿದ್ದು, ಕಾರ್ಯಕಾರಿ ಸಮಿತಿ ನಿರ್ಧರಿಸಲಿದೆ.

ಮೊಹಮ್ಮದ್ ಮಾಝಿ ಇತ್ತೀಚೆಗೆ ಸುದ್ದಿಯಲ್ಲಿದ್ದರು ಇವರು ಯಾವ ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿದ್ದಾರೆ?

a) ಜಾರ್ಖಂಡ್
b) ಅಸ್ಸಾಂ
c) ಒಡಿಸ್ಸಾ
d) ಮಧ್ಯಪ್ರದೇಶ

ಉತ್ತರ: c)

4) ಮೋಹನ್ ಮಾಝಿ ಇತ್ತೀಚೆಗೆ ಸುದ್ದಿಯಲ್ಲಿದ್ದರು. ಇವರು ಯಾವ ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿದ್ದಾರೆ?

ಎ) ಜಾರ್ಖಂಡ್ ಬಿ) ಆಸ್ಸಾಂ

ಸಿ) ಒಡಿಶಾ ಡಿ) ಮಧ್ಯಪ್ರದೇಶ

ಉತ್ತರ: ಸಿ) ಒಡಿಶಾ

- **ವಿವರಣೆ:** ಒಡಿಶಾದ ವಿಧಾನಸಭಾ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷ ಸ್ಪಷ್ಟ ಬಹುಮತ ಪಡೆಯಿತು. ಬುಡಕಟ್ಟು ಸಮುದಾಯದ ಮೋಹನ್ ಮಾಝಿ ರಾಜ್ಯದ ಹೊಸ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಮಾಝಿ ಕಿಯೊನಿಹರ್ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾದವರು. ಇವರು ಗ್ರಾಮ ಸರಪಂಚ್, ಗ್ರಾಮ ಪಂಚಾಯಿತಿ ಮುಖ್ಯಸ್ಥ, ಬಿಜೆಪಿ ಆದಿವಾಸಿ ಮೋರ್ಚಾದ ಅಧ್ಯಕ್ಷ ಸೇರಿ ವಿವಿಧ ಹುದ್ದೆಗಳನ್ನು ನಿಭಾಯಿಸಿದ್ದಾರೆ.

ಸುಮಿತ್ರ ಪವರ್ ಇತ್ತೀಚೆಗೆ ಸುದ್ದಿಯಲ್ಲಿದ್ದರು ಅವರು ಯಾವ ಕ್ಷೇತ್ರಕ್ಕೆ ಸಂಬಂಧಿಸಿದವರು ಆಗಿದ್ದಾರೆ?

a) ಕ್ರೀಡೆ
b) ನೃತ್ಯ
c) ವಿಜ್ಞಾನ
d) ರಾಜಕೀಯ

ಉತ್ತರ: d)

# KAS/PDO ಎಕ್ಸಾಮ್

## ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯುಕ್ತವಾದ ಪ್ರಚಲಿತ ವಿದ್ಯಮಾನಕ್ಕೆ ಸಂಬಂಧಿಸಿದ ಪ್ರಶ್ನೋತ್ತರ

### ಪ್ರಚಲಿತ ವಿದ್ಯಮಾನಗಳ ಅವಲೋಕನ

1) 'ಮನ್ನುಯಿರ್ ಕಾತು ಮನ್ನುಯಿರ್ ಕಾಪ್ಪೊಂ ಯೋಜನೆಗೆ ಯಾವ ರಾಜ್ಯದಲ್ಲಿ ಚಾಲನೆ ನೀಡಲಾಗಿದೆ?

ಎ) ಆಂಧ್ರಪ್ರದೇಶ ಬಿ) ತಮಿಳುನಾಡು
ಸಿ) ತೆಲಂಗಾಣ ಡಿ) ಕೇರಳ

ಉತ್ತರ: ಡಿ) ತಮಿಳುನಾಡು

- **ವಿವರಣೆ:** ತಮಿಳುನಾಡು ಮುಖ್ಯಮಂತ್ರಿ ಎಂ.ಕೆ.ಸ್ಟಾಲಿನ್ ಅವರು 'ಮನ್ನುಯಿರ್ ಕಾತು ಮನ್ನುಯಿರ್ ಕಾಪ್ಪೊಂ' ಯೋಜನೆಗೆ ಇತ್ತೀಚೆಗೆ ಚಾಲನೆ ನೀಡಿದರು. 206 ಕೋಟಿ ರೂ.ವೆಚ್ಚದ ಈ ಯೋಜನೆ ರಾಜ್ಯಾದ್ಯಂತ ಸುಸ್ಥಿರ ಕೃಷಿ ಅನುಷ್ಠಾನದೆಡೆಗಿನ ದೊಡ್ಡ ಹೆಜ್ಜೆಯಾಗಿದ್ದು, ಮಣ್ಣಿನ ಆರೋಗ್ಯ ಮತ್ತು ಫಲವತ್ತತೆ ಸುಧಾರಿಸುವ ಗುರಿ ಹೊಂದಿದೆ.
- ಹಸಿರು ಗೊಬ್ಬರ ವಿಧಾನ ಬಳಸಿಕೊಂಡು ಭೂಮಿಯ ಫಲವತ್ತತೆ ರಕ್ಷಿಸುವುದು ಯೋಜನೆಯ ಪ್ರಮುಖ ಭಾಗವಾಗಿದೆ. ಇದಕ್ಕಾಗಿ 20 ಕೋಟಿ ರೂ.ಗಳನ್ನು ಸ್ಟಾರ್ಟ್‌ಅಪ್ ನಿಧಿಯನ್ನಾಗಿ ಮೀಸಲಿಡಲಾಗಿದೆ. ಈ ಯೋಜನೆಯು 2024–25ರಲ್ಲಿ ಸುಮಾರು 2ಲಕ್ಷ ಎಕರೆಗಳಲ್ಲಿ ಹಸಿರು ಗೊಬ್ಬರ ಬೀಜಗಳನ್ನು ಹರಡಲು ಯೋಜಿಸಿದೆ.

2) ಹೇಳಿಕೆಗಳನ್ನು ಓದಿಕೊಂಡು ಸರಿಯಾಗಿ ಉತ್ತರಿಸಿ.

ಹೇಳಿಕೆ 1: ಸ್ಟೇಟ್ ಬ್ಯಾಂಕ್ ಇಂಡಿಯಾ 1949 ಜುಲೈ 1 ರಂದು ಸ್ಥಾಪನೆಗೊಂಡಿತು.

ಹೇಳಿಕೆ 2: ಸ್ಟೇಟ್ ಬ್ಯಾಂಕ್ ಇಂಡಿಯಾದ ನೂತನ ಅಧ್ಯಕ್ಷರಾಗಿ ಚಲ್ಲ ಶ್ರೀನಿವಾಸಲು ಸೆಟ್ಟಿ ಆಯ್ಕೆಯಾಗಿದ್ದಾರೆ.

ಎ) ಹೇಳಿಕೆ 1 ಸರಿ
ಬಿ) ಹೇಳಿಕೆ 2 ಸರಿ
ಸಿ) ಎರಡೂ ಹೇಳಿಕೆಗಳು ಸರಿ
ಡಿ) ಎರಡೂ ಹೇಳಿಕೆಗಳು ತಪ್ಪು

ಉತ್ತರ: ಬಿ) ಹೇಳಿಕೆ 2 ಸರಿ

- **ವಿವರಣೆ:** ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ (ಎಸ್‌ಬಿಐ) ಭಾರತದ ಬಹುರಾಷ್ಟ್ರೀಯ ಸಾರ್ವಜನಿಕ ವಲಯದ ಬ್ಯಾಂಕ್. 1955 ಜುಲೈ 1ರಂದು ಸ್ಥಾಪನೆಯಾಯಿತು. ಇದರ ಕೇಂದ್ರ ಕಚೇರಿ ಮುಂಬೈನಲ್ಲಿದೆ. ಜೂನ್‌ನಲ್ಲಿ ಈ ಬ್ಯಾಂಕ್‌ನ ನೂತನ ಅಧ್ಯಕ್ಷರಾಗಿ ಚಲ್ಲ ಶ್ರೀನಿವಾಸಲು ಸೆಟ್ಟಿ ಆಯ್ಕೆಯಾದರು. ಈ ನೇಮಕಾತಿಗೂ ಮುನ್ನ ಇವರು ಎಸ್‌ಬಿಐನ ವ್ಯವಸ್ಥಾಪಕ ನಿರ್ದೇಶಕರಾಗಿದ್ದರು.
- ಹಣಕಾಸು ಸೇವಾ ಸಂಸ್ಥೆಗಳ ಬ್ಯೂರೊ ಸೆಟ್ಟಿ ಅವರ ಆಯ್ಕೆ ಮಾಡಿದೆ. 1988ರಲ್ಲಿ ಸೆಟ್ಟಿ ಪ್ರೊಬೇಷನರಿ ಅಧಿಕಾರಿಯಾಗಿ ಎಸ್‌ಬಿಐಗೆ ಸೇರ್ಪಡೆಗೊಂಡರು. ಕಳೆದ ಮೂರು ದಶಕಗಳಿಂದ ಬ್ಯಾಂಕ್‌ನ ಕಾರ್ಪೊರೇಟ್ ಕ್ರೆಡಿಟ್ ರಿಟೇಲ್ ಡಿಜಿಟಲ್ ಮತ್ತು ಅಂತಾರಾಷ್ಟ್ರೀಯ ಬ್ಯಾಂಕಿಂಗ್ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಈ ವಲಯದಲ್ಲಿ ತಜ್ಞರೆನಿಸಿದ್ದಾರೆ. 2000ರಲ್ಲಿ ಇವರು ಬ್ಯಾಂಕ್‌ನ ವ್ಯವಸ್ಥಾಪಕ ನಿರ್ದೇಶಕರಾದರು. ಕೇಂದ್ರ ಸರ್ಕಾರ ನೇಮಿಸಿದ ಹಲವು ಸಮಿತಿ ಮತ್ತು ಕಾರ್ಯಪಡೆಗಳಲ್ಲಿ ಸೆಟ್ಟಿ ಕಾರ್ಯ ನಿರ್ವಹಿಸಿದ್ದಾರೆ.

3) ಸುನೇತ್ರಾ ಪವಾರ್ ಇತ್ತೀಚೆಗೆ ಸುದ್ದಿಯಲ್ಲಿದ್ದರು. ಇವರು ಯಾವ ಕ್ಷೇತ್ರಕ್ಕೆ ಸಂಬಂಧಿಸಿದವರು?

ಎ) ಕ್ರೀಡೆ ಬಿ) ನೃತ್ಯಶಾಸ್ತ್ರ
ಸಿ) ಜೀವ ವಿಜ್ಞಾನ ಡಿ) ರಾಜಕೀಯ

ಉತ್ತರ: ಡಿ) ರಾಜಕೀಯ

- **ವಿವರಣೆ:** ಸುನೇತ್ರಾ ಪವಾರ್ ಇವರು ಮಹಾರಾಷ್ಟ್ರದ ಉಪ ಮುಖ್ಯಮಂತ್ರಿ ಅಜಿತ್ ಪವಾರ್ ಅವರ ಪತ್ನಿ. ಇತ್ತೀಚೆಗೆ ನ್ಯಾಷನಲಿಸ್ಟ್ ಕಾಂಗ್ರೆಸ್ ಪಕ್ಷ (ಎನ್‌ಸಿಪಿ)ದ ವತಿಯಿಂದ ಸುನೇತ್ರಾ ಪವಾರ್ ರಾಜ್ಯಸಭೆಗೆ ಚುನಾಯಿತರಾದರು. ಎನ್‌ಸಿಪಿ ಕಾರ್ಯನಿರ್ವಾಹಕ ಅಧ್ಯಕ್ಷ ಮತ್ತು ಕೇಂದ್ರದ ಮಾಜಿ ಸಚಿವ ಪ್ರಫುಲ್ ಪಟೇಲ್ ಅವರ ರಾಜೀನಾಮೆಯಿಂದಾಗಿ ಮಹಾರಾಷ್ಟ್ರದಲ್ಲಿ ಒಂದು ರಾಜ್ಯಸಭಾ ಹುದ್ದೆ ತೆರವಾಗಿತ್ತು.

4) 'ಟ್ರಿಂಕೊಮಲೈ' ಇತ್ತೀಚೆಗೆ ಸುದ್ದಿಯಲ್ಲಿತ್ತು. ಇದು ಯಾವ ದೇಶದಲ್ಲಿದೆ?

ಎ) ಶ್ರೀಲಂಕಾ ಬಿ) ಭೂತಾನ್
ಸಿ) ಥೈಲ್ಯಾಂಡ್
ಡಿ) ಕಾಂಬೋಡಿಯಾ

ಉತ್ತರ: ಎ) ಶ್ರೀಲಂಕಾ

- **ವಿವರಣೆ:** ಭಾರತದ ವಿದೇಶಾಂಗ ವ್ಯವಹಾರಗಳ ಸಚಿವ ಎಸ್.ಜೈಶಂಕರ್ ಇತ್ತೀಚೆಗೆ ಶ್ರೀಲಂಕಾಕ್ಕೆ ಭೇಟಿ ನೀಡಿದ್ದರು. ಆ ದೇಶದ ವಿದೇಶಾಂಗ ಸಚಿವ ಅಲಿ ಸಬ್ರಿ ಅವರೊಂದಿಗೆ ಉಭಯ ದೇಶಗಳ ಬಾಂಧವ್ಯ ವೃದ್ಧಿ ಮತ್ತು ಅಭಿವೃದ್ಧಿ ಪೂರಕ ವಿಷಯಗಳ ಕುರಿತು ಸಮಾಲೋಚನೆ ನಡೆಸಿದರು. ಮರುಬಳಕೆಯ ಇಂಧನ ಕ್ಷೇತ್ರದಲ್ಲಿನ ಸಹಕಾರ ಮುಂದುವರಿಸಿಕೊಂಡು ಹೋಗಲು ಸಹಮತ ವ್ಯಕ್ತವಾಯಿತು.
- ಭಾರತ ಸರ್ಕಾರದ ನೆರವಿನಿಂದ ಶ್ರೀಲಂಕಾ ತನ್ನ ಪೂರ್ವ ಭಾಗದ ಟ್ರಿಂಕೋಮಲೈನಲ್ಲಿ ಕೈಗಾರಿಕಾ ವಲಯ ಸ್ಥಾಪಿಸಲಿದೆ. ಇದರಿಂದಾಗಿ ಶ್ರೀಲಂಕಾದಲ್ಲಿನ ಭಾರತೀಯರಿಗೂ ಹೆಚ್ಚಿನ ಸಂಖ್ಯೆಯಲ್ಲಿ ಉದ್ಯೋಗಾವಕಾಶಗಳು ಲಭಿಸಲಿವೆ. ಭಾರತದ ನೆರವಿನಿಂದ ಶ್ರೀಲಂಕಾ ಟ್ರಿಂಕೊಮಲೈನಲ್ಲಿ ಆಯಿಲ್ ಟ್ಯಾಂಕ್ ಫಾರ್ಮ್ ನಿರ್ಮಿಸುತ್ತಿದೆ.




ಅರವಿಂದ್ ಇಂಡಿಯಾ

ಅವಲೋಕನ ಮಾಸಪತ್ರಿಕೆ
ವಿಜಯನಗರ, ಬೆಂಗಳೂರು.
ಮೊ. 9481389641

ಆಧುನಿಕ ಬೆಂಗಳೂರಿನ ಸಂಸ್ಥಾಪಕರಾದ ಕೆಂಪೇಗೌಡರ ಬಂಧನದಲ್ಲಿದ್ದ ಸೆರೆಮನೆ ಇತ್ತೀಚಿಗೆ ಎಲ್ಲಿ ಪತ್ತೆಯಾಗಿದೆ?

a) ಆನೆಗುಂದಿ
b) ಲಕ್ಕುಂಡಿ
c) ಮಾಗಡಿ
d) ಶಿರಾ

ಉತ್ತರ: a)

2) ಆಧುನಿಕ ಬೆಂಗಳೂರಿನ ಸಂಸ್ಥಾಪಕ ಕೆಂಪೇಗೌಡ ಅವರು ಬಂಧನದಲ್ಲಿದ್ದ ಸೆರೆಮನೆ ಎಲ್ಲಿ ಪತ್ತೆಯಾಗಿದೆ?

ಎ) ಶಿರಾ ಬಿ) ಆನೆಗೊಂದಿ

ಸಿ) ಲಕ್ಕುಂಡಿ ಡಿ) ಮಾಗಡಿ

ಉತ್ತರ: ಬಿ) ಆನೆಗೊಂದಿ

- ವಿವರಣೆ: ಆಧುನಿಕ ಬೆಂಗಳೂರು ಸಂಸ್ಥಾಪಕ ಕೆಂಪೇಗೌಡ ಅವರು ಬಂಧನದಲ್ಲಿದ್ದ ಸೆರೆಮನೆ ಆನೆಗೊಂದಿಯಲ್ಲಿ ಪತ್ತೆಯಾಗಿದೆ. ಹಲವಾರು ವರ್ಷಗಳಿಂದ ನಡೆಸಿದ ನಿರಂತರ ಶೋಧನೆಯಿಂದಾಗಿ ಆನೆಗೊಂದಿಯ ಜಿಂಜಿರ ಬೆಟ್ಟದಲ್ಲಿ ಸೆರೆಮನೆ ಪತ್ತೆಯಾಗಿದೆ.
- ವಿಜಯನಗರ ಸಾಮ್ರಾಜ್ಯದ ನಿಷ್ಠಾವಂತ ಮಾಂಡಲಿಕರಾಗಿದ್ದ ಯಲಹಂಕ ನಾಡಪ್ರಭು ಕೆಂಪೇಗೌಡರು ಅಳಿಯ ರಾಮರಾಯನ ಕಾಲದಲ್ಲಿ ತನ್ನ ರಾಜ್ಯದಲ್ಲಿ ಉಂಟಾದ ಆರ್ಥಿಕ ದುಸ್ಥಿತಿ ಸುಧಾರಿಸಲು ಮತ್ತು ಪ್ರಜೆಗಳ ಹಿತರಕ್ಷಣೆಗಾಗಿ ಸಾಮ್ರಾಟನ ಅನುಮತಿ ಪಡೆಯದೆ 'ಭೈರೇಶ್ವರ' ಹೆಸರಿನ ಸ್ವಂತ ನಾಣ್ಯಗಳನ್ನು ಚಲಾಯಿಸಿದರು. ಇದರಿಂದ ಕೆರಳಿದ ಅಳಿಯ ರಾಮರಾಯ ಕೆಂಪೇಗೌಡರನ್ನು ರಾಜಧಾನಿ ವಿಜಯನಗರದಲ್ಲಿ ಜರುಗುತ್ತಿದ್ದ ದಸರಾ ಉತ್ಸವಕ್ಕೆ ಆಹ್ವಾನಿಸಿ ಬಂಧಿಸಿ ಆನೆಗೊಂದಿ ಸೆರೆಮನೆಗೆ ತಳ್ಳಿದ್ದ.
- ಕೆಂಪೇಗೌಡರು ಕ್ರಿ.ಶ.1560ರಿಂದ ಐದು ವರ್ಷಗಳ ಕಾಲ ಆನೆಗೊಂದಿ ಸೆರೆಮನೆಯಲ್ಲಿದ್ದರು. ಕ್ರಿ.ಶ.1565ರಲ್ಲಿ ಭಾರಿ ದಂಡತೆತ್ತು ಬಿಡುಗಡೆಗೊಂಡರು. ಈ ಸಂಗತಿಯನ್ನು ಮೈಸೂರ್ ಗೆಜೆಟಿಯರ್‌ನಲ್ಲಿ ಉಲ್ಲೇಖಿಸಲಾಗಿದೆ.

# 2028 ರ ಒಲಂಪಿಕ್ಸ್ ಯಾವ ದೇಶದಲ್ಲಿ ನಡೆಯಲಿದೆ?

a) ಭಾರತ
b) ಅಮೆರಿಕ
c) ಫ್ರಾನ್ಸ್
d) ಕೆನಡಾ

ಉತ್ತರ:–b)

# ಗುಡ್ ಬೈ ಪ್ಯಾರಿಸ್ ಒಲಿಂಪಿಕ್ಸ್ ಸೀಯು @ ಲಾಸ್ ಏಂಜಲೀಸ್






- 2024ರ ಪ್ಯಾರಿಸ್ ಒಲಿಂಪಿಕ್ಸ್‌ಗೆ ಭಾನುವಾರ ವರ್ಣ ರಂಜಿತ ತೆರೆ
- 6 ಪದಕದೊಂದಿಗೆ (1 ಬೆಳ್ಳಿ, 5 ಕಂಚು) ಭಾರತ ಅಭಿಯಾನ ಅಂತ್ಯ
- ಮಾಜಿ ಶೂಟರ್ ಅಭಿನವ್ ಬಿಂದ್ರಾಗೆ ಒಲಿಂಪಿಕ್ ಆರ್ಡರ್ ಗೌರವ
- ಅಮೆರಿಕದ ಲಾಸ್ ಏಂಜಲೀಸ್‌ನಲ್ಲಿ 2028ರ ಒಲಿಂಪಿಕ್ಸ್ ಆಯೋಜನೆ
- ಈ ಒಲಿಂಪಿಕ್ಸ್‌ನಲ್ಲಿ 40 ಚಿನ್ನ ಸೇರಿದಂತೆ 126 ಪದಕ ಗೆದ್ದು ಪ್ರಾಬಲ್ಯ ಸಾಧಿಸಿದ ಅಮೆರಿಕ

# ವಿಶ್ವ ಕ್ಯಾಲಿಗ್ರಫಿ ದಿನವನ್ನು ಎಂದು ಆಚರಿಸಲಾಗುತ್ತದೆ?

a) ಆಗಸ್ಟ್ 13
b) ಆಗಸ್ಟ್ 14
c) ಆಗಸ್ಟ್ 15
d) ಆಗಸ್ಟ್ 16

**ಉತ್ತರ:b)**

# ಆಗಸ್ಟ್ - 14:

# ವಿಶ್ವ ಕ್ಯಾಲಿಗ್ರಫಿ ದಿನ

ಹೆಚ್ಚಿನ ಡಿಜಿಟಲ್ ಮತ್ತು ಮುದ್ರಿತ ಮಾಹಿತಿಯಿಂದಾಗಿ ಕೈಬರಹದ ಪ್ರಾಮುಖ್ಯತೆ ಮರೆತುಹೋಗುತ್ತಿದೆ. ಇದನ್ನು ನೆನಪಿಸಲು ವಾರ್ಷಿಕವಾಗಿ ಆಗಸ್ಟ್ ಎರಡನೇ ಬುಧವಾರದಂದು ವಿಶ್ವ ಕ್ಯಾಲಿಗ್ರಫಿ ದಿನ ಆಚರಿಸಲಾಗುತ್ತದೆ.

ಈ ದಿನವನ್ನು ಪೆನ್ ಕಂಪನಿಯೊಂದು ಸ್ಥಾಪಿಸಿತು. ಸುಂದರ ಕೈ ಬರಹವೂ ಒಂದು ಕೌಶಲ್ಯ ಎಂದು ನೆನಪಿಸುವುದು ಈ ದಿನದ ಪ್ರಮುಖ ಉದ್ದೇಶ. ಪೂರ್ವ ಏಷ್ಯಾದಲ್ಲಿ, ಕ್ಯಾಲಿಗ್ರಫಿಯ ಮೊದಲ ಉಲ್ಲೇಖವು ಸುಮಾರು ಕ್ರಿ.ಪೂ 2000ದಿಂದಲೂ ಇದೆ. ಚೀನಾದಲ್ಲಿ ಕ್ಯಾಲಿಗ್ರಫಿ ಒಂದು ಪ್ರಮುಖ ಚಿತ್ರಕಲೆಯಾಗಿತ್ತು.




ಸುಂದರವಾದ ಬರವಣಿಗೆಯ ಕಲೆಯು ಕೆಲಸ ಮತ್ತು ಸಂಶೋಧನೆಯ ಗುರಿಗಳನ್ನು ಮೀಸಲಿಡುವ ಒಂದು ನಿರ್ದಿಷ್ಟ ವಿಜ್ಞಾನವಾಗುತ್ತಿದೆ. ಯುರೋಪ್‌ನಲ್ಲಿ, ಕ್ಯಾಲಿಗ್ರಫಿಯ ರಚನೆಯು ಗ್ರೀಕೋ-ರೋಮನ್ ಬರವಣಿಗೆಯನ್ನು ಆಧರಿಸಿದೆ.

ಕ್ಯಾಲಿಗ್ರಫಿ ಕಲೆಯು ವಿವಿಧ ಸಂಸ್ಕೃತಿಗಳಲ್ಲಿ ಸಾವಿರಾರು ವರ್ಷಗಳಿಂದ ಅಭಿವೃದ್ಧಿ ಹೊಂದಿದ ಪ್ರಾಚೀನ ಸಂಪ್ರದಾಯಗಳನ್ನು ಸಂಯೋಜಿಸುತ್ತದೆ. ಇಂದು ಈ ಲಿಖಿತ ಕಲೆಯ ಹಲವು ವಿಧಗಳಿವೆ - ಪಾಶ್ಚಿಮಾತ್ಯ ಯುರೋಪಿಯನ್, ಏಷ್ಯನ್, ಚೈನೀಸ್, ಜಪಾನೀಸ್, ಇಸ್ಲಾಮಿಕ್, ಇತ್ಯಾದಿ. ಅವುಗಳಲ್ಲಿ ಪ್ರತಿಯೊಂದರ ರಚನೆಯು ಸಾಮಾನ್ಯವಾಗಿ ಕ್ಯಾಲಿಗ್ರಫಿಯ ಬೆಳವಣಿಗೆಯ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ.

**ಜಾರಿ ನಿರ್ದೇಶನಾಲಯದ ಪೂರ್ಣಾವಧಿಯ ನಿರ್ದೇಶಕರಾಗಿ ಯಾರು ನೇಮಕಗೊಂಡಿದ್ದಾರೆ?**

a) ರಾಹುಲ್ ನವೀನ್
b) ಸತ್ಯಜಿತ್ ಸಿಂಗ್
c) ಅಭಯ್ ಕುಮಾರ್
d) ನವೀನ್ ಮಿರ್ಜಾ

**ಸರಿಯಾದ ಉತ್ತರ: a)**

# ಇ.ಡಿ. ಪೂರ್ಣಾವಧಿ ಮುಖ್ಯಸ್ಥರಾಗಿ ರಾಹುಲ್ ನೇಮಕ

ನವದೆಹಲಿ: ಜಾರಿ ನಿರ್ದೇಶನಾಲಯದ ಹಂಗಾಮಿ ನಿರ್ದೇಶಕ ರಾಹುಲ್ ನವೀನ್ ಅವರನ್ನು ಪೂರ್ಣಾವಧಿ ನಿರ್ದೇಶಕರಾಗಿ ನೇಮಕ ಮಾಡಲಾಗಿದೆ. ಸಂಪುಟದ ನೇಮಕಾತಿ ಸಮಿತಿ ರಾಹುಲ್ ಅವರನ್ನು 2 ವರ್ಷ ಅವಧಿಗೆ ನೇಮಿಸಿದೆ. ರಾಹುಲ್ ಕಳೆದ ವರ್ಷ ಸೆಪ್ಟೆಂಬರ್‌ನಿಂದ ಇ.ಡಿ. ವಿಶೇಷ ನಿರ್ದೇಶಕ, ಹಂಗಾಮಿ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು. ತಮ್ಮ ಅವಧಿಯಲ್ಲಿ ದೆಹಲಿ ಸಿಎಂ ಅರವಿಂದ್ ಕೇಜ್ರಿವಾಲ್, ಜಾರ್ಖಂಡ್ ಸಿಎಂ ಹೇಮಂತ್ ಸೊರೇನ್ ಅವರನ್ನು ಅಕ್ರಮ ಹಣ ವರ್ಗಾವಣೆ ಪ್ರಕರಣಗಳಲ್ಲಿ ಬಂಧಿಸಿದ್ದಾರೆ. ಈ ನಡುವೆ ಕೇಂದ್ರ ಗೃಹ ಕಾರ್ಯದರ್ಶಿಯನ್ನಾಗಿ ಗೋವಿಂದ ಮೋಹನ್ ರನ್ನು ನೇಮಿಸಲಾಗಿದೆ.

ಇತ್ತೀಚಿಗೆ ಪ್ಯಾರಿಸ್ ಒಲಂಪಿಕ್ಸ್ ನಲ್ಲಿ ಬೆಳ್ಳಿ ಪದಕ ಗೆದ್ದ ಬಿಂಗ್ ಜೆ ಯಾವು ತಮ್ಮ ವೃತ್ತಿ ಬದುಕಿಗೆ ವಿದಾಯ ಘೋಷಿಸಿದ್ದಾರೆ. ಯಾವ ಕ್ರೀಡೆಗೆ ಸಂಬಂಧ ಪಟ್ಟಿದ್ದಾರೆ?

a) ಬ್ಯಾಡ್ಮಿಂಟನ್
b) ಟೇಬಲ್ ಟೆನ್ನಿಸ್
c) ಶೂಟಿಂಗ್
d) ವಾಲಿಬಾಲ್

ಉತ್ತರ: a)

# ಬ್ಯಾಡ್ಮಿಂಟನ್‌ಗೆ ಹಿ ಬಿಂಗ್ಜಿಯಾವೊ ವಿದಾಯ

ಪ್ಯಾರಿಸ್: ಬೆಳ್ಳಿ ಪದಕ ವಿಜೇತೆ ಹಿ ಬಿಂಗ್ಜಿಯಾವೊ ಅಂತಾರಾಷ್ಟ್ರೀಯ ಬ್ಯಾಡ್ಮಿಂಟನ್‌ಗೆ ನಿವೃತ್ತಿ ಘೋಷಿಸಿದ್ದಾರೆ ಎಂದು ಬ್ಯಾಡ್ಮಿಂಟನ್ ವರ್ಲ್ಡ್ ಫೆಡರೇಶನ್ ತಿಳಿಸಿದೆ. ಒಲಿಂಪಿಕ್‌ನಲ್ಲಿ ಮೊದಲ ಪದಕವನ್ನು ಗೆದ್ದ ಚೀನಾದ ಶಟ್ಲರ್ 27 ನೇ ವಯಸ್ಸಿನಲ್ಲಿ ಕ್ರೀಡೆಗೆ ವಿದಾಯ ಹೇಳಿದ್ದಾರೆ. ಆದಾಗ್ಯೂ, ಅವರು ದೇಶೀಯ ಪಂದ್ಯಾವಳಿಗಳಲ್ಲಿ ಆಡುವುದನ್ನು ಮುಂದುವರಿಸಲಿದ್ದಾರೆ ಎಂದು ಜಾಗತಿಕ ಬ್ಯಾಡ್ಮಿಂಟನ್ ಆಡಳಿತ ಮಂಡಳಿ ತಿಳಿಸಿದೆ. ಪ್ಯಾರಿಸ್‌ನಲ್ಲಿ ನಡೆದ ಮಹಿಳಾ ಸಿಂಗಲ್ಸ್ ಫೈನಲ್‌ನಲ್ಲಿ ಹಿ ಬಿಂಗ್ಜಿಯಾವೊ ದಕ್ಷಿಣ ಕೊರಿಯಾದ ಆನ್ ಸೆ ಯಂಗ್ ವಿರುದ್ಧ ಸೋತರು. ಚೀನಾದ ಶಟ್ಲರ್ 13–21, 16–21 ನೇರ ಗೇಮ್‌ಗಳಿಂದ ಆನ್ ವಿರುದ್ಧ ಸೋಲನುಭವಿಸಿದರು. ಹಿ ಬಿಂಗ್ಜಿಯಾವೊ ಕ್ವಾರ್ಟರ್ ಫೈನಲ್‌ನಲ್ಲಿ ಎರಡನೇ ಶ್ರೇಯಾಂಕದ ಚೆನ್ ಯುಫೆ ಅವರನ್ನು ಸೋಲಿಸುವ ಮೊದಲು ರೌಂಡ್ ಆಫ್ 16 ರಲ್ಲಿ ಭಾರತದ ಪಿವಿ ಸಿಂಧು ಅವರನ್ನು ಸೋಲಿಸಿದರು.



ಕರ್ನಾಟಕ ರಾಜ್ಯ ಸರ್ಕಾರ ಪ್ರಸಕ್ತ ಸಾಲಿನ ಡಿ ದೇವರಾಜು ಅರಸು ಪ್ರಶಸ್ತಿಯನ್ನು ಯಾರಿಗೆ ನೀಡಲಾಗಿದೆ?

a) ಎಸ್ ಕೆ ಕಾಂತ
b) ಕಮಲಾದೇವಿ
c) ಕೃಷ್ಣಕುಮಾರ್
d) ಎಸ್ ಆರ್ ರವಿಕುಮಾರ್

ಉತ್ತರ: a)

### 20ರಂದು ಬೆಂಗಳೂರಿನಲ್ಲಿ ಪ್ರದಾನ ಮಾಡಲಿರುವ ಸಿಎಂ ಸಿದ್ದರಾಮಯ್ಯ

# ಎಸ್.ಕೆ. ಕಾಂತಗೆ ಅರಸು ಪ್ರಶಸ್ತಿ

**ವಿಕ ಸುದ್ದಿಲೋಕ** ಬೆಂಗಳೂರು

ಮಾಜಿ ಸಚಿವ ಹಾಗೂ ಕಾರ್ಮಿಕ ಹೋರಾಟಗಾರ ಎಸ್.ಕೆ. ಕಾಂತ ಅವರು ರಾಜ್ಯ ಸರಕಾರ ಕೊಡಮಾಡುವ ಪ್ರಸಕ್ತ ಸಾಲಿನ ಡಿ.ದೇವರಾಜ ಅರಸು ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

ಅರಸು ಪ್ರಶಸ್ತಿಯು 5 ಲಕ್ಷ ರೂ. ನಗದು ಹಾಗೂ ಫಲಕವನ್ನು ಒಳಗೊಂಡಿದೆ. ಆಗಸ್ಟ್ 20ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಬೆಳಗ್ಗೆ 11 ಗಂಟೆಗೆ ನಡೆಯುವ ಮಾಜಿ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರ 109ನೇ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ಸಿಎಂ ಸಿದ್ದರಾಮಯ್ಯ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ.

ವಿಕಾಸಸೌಧದಲ್ಲಿ ಬುಧವಾರ ಪತ್ರಿಕಾ ಗೋಷ್ಠಿಯಲ್ಲಿ ಈ ಬಗ್ಗೆ ಮಾಹಿತಿ ನೀಡಿದ ಕನ್ನಡ ಮತ್ತು ಸಂಸ್ಕೃತಿ ಸಚಿವ ಶಿವರಾಜ ತಂಗಡಗಿ, ''ಪ್ರಸಕ್ತ ಸಾಲಿನ ಪ್ರತಿಷ್ಠಿತ ಡಿ. ದೇವರಾಜ ಅರಸು ರಾಜ್ಯಮಟ್ಟದ ಪ್ರಶಸ್ತಿಗೆ ಮಾಜಿ ಸಚಿವರಾದ ಎಸ್.ಕೆ. ಕಾಂತ ಅವರನ್ನು ಆಯ್ಕೆ ಮಾಡಲಾಗಿದೆ. ಸಾಹಿತಿ ಅಲ್ಲಮಪ್ರಭು ಬೆಟ್ಟದೂರ ಅವರ ನೇತೃತ್ವದ ಆಯ್ಕೆ ಸಮಿತಿ ಪ್ರಶಸ್ತಿ ಪುರಸ್ಕೃತರನ್ನು ಆಯ್ಕೆ ಮಾಡಿದೆ,'' ಎಂದು ಹೇಳಿದರು.



- ಸಾಹಿತಿ ಅಲ್ಲಮಪ್ರಭು ಬೆಟ್ಟದೂರ ನೇತೃತ್ವದ ಸಮಿತಿಯಿಂದ ಮಾಜಿ ಸಚಿವ ಎಸ್.ಕೆ. ಕಾಂತ ಆಯ್ಕೆ
- ದಲಿತ ಚಳವಳಿ, ರೈತ ಚಳವಳಿ, ಗೋಕಾಕ್ ಚಳವಳಿಯಲ್ಲೂ ಸಕ್ರಿಯರಾಗಿರುವ ಕಾರ್ಮಿಕ ಹೋರಾಟಗಾರ

**ಎಸ್.ಕೆ. ಕಾಂತ ಹೋರಾಟ ಹಿನ್ನೆಲೆ**

ಕಲಬುರಗಿ ಜಿಲ್ಲೆಯ ಹಾಗರಗುಂಡಗಿಯಲ್ಲಿ 1938ರಲ್ಲಿ ಜನಿಸಿದ ಎಸ್.ಕೆ. ಕಾಂತ ಅವರು ಶೋಷಿತರು, ಕೂಲಿ ಕಾರ್ಮಿಕರು, ದಮನಿತರ ದನಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಹೋರಾಟಗಾರರು.

ಪ್ರಾಥಮಿಕ ಶಿಕ್ಷಣಕ್ಕಾಗಿ ಕಲಬುರಗಿಗೆ ತೆರಳಿದರೂ ಮನೆಯ ಆರ್ಥಿಕ ಪರಿಸ್ಥಿತಿ ಕಾರಣಕ್ಕೆ ಶಾಲೆ ಬಿಟ್ಟು ಎಂ.ಎಸ್.ಕೆ. ಮಿಲ್‌ನಲ್ಲಿ ಕಾರ್ಮಿಕರಾಗಿ ಸೇರಿದರು. ಅಲ್ಲಿನ ಕಾರ್ಮಿಕರಿಗೆ ಉಂಟಾಗುತ್ತಿದ್ದ ಅನ್ಯಾಯವನ್ನು ಪ್ರತಿಭಟಿಸಿ ಸತ್ಯಾಗ್ರಹ ನಡೆಸುವ ಮೂಲಕ ಕಾರ್ಮಿಕ ಮುಖಂಡರಾಗಿ ಹೊರಹೊಮ್ಮಿದರು. 1986ರಲ್ಲಿ ಸಿದ್ದರಾಮಯ್ಯ, ಎಂ.ಪಿ. ಪ್ರಕಾಶ್ ಅವರೊಂದಿಗೆ ಅಂದಿನ ಸಿಎಂ ರಾಮಕೃಷ್ಣ ಹೆಗಡೆ ಅವರ ಸಂಪುಟ ಸೇರಿದ ಎಸ್.ಕೆ. ಕಾಂತ ಅವರು ಕಾರ್ಮಿಕ ಸಚಿವರಾಗಿದ್ದು ವಿಶೇಷ.

ಕಾರ್ಮಿಕರ ಪರವಾಗಿ ನಿರ್ಧಾರ ತೆಗೆದುಕೊಳ್ಳುತ್ತಿದ್ದ ಕಾರಣಕ್ಕಾಗಿಯೇ ಕಾಂತ ಅವರು ಕೇವಲ 18 ತಿಂಗಳಲ್ಲಿ ಮಂತ್ರಿ ಸ್ಥಾನ ಕಳೆದುಕೊಂಡಿದ್ದು ವಿಪರ್ಯಾಸ. ಆದರೂ ಕಾರ್ಮಿಕರು, ಶ್ರಮಿಕರ ಪರ ಹೋರಾಟದಿಂದ ಹಿಂದೆ ಸರಿಯಲಿಲ್ಲ. ಆಳಂದ ಸಕ್ಕರೆ ಕಾರ್ಖಾನೆಯ ಕಾರ್ಮಿಕರ ಪರವಾಗಿ ಸತ್ಯಾಗ್ರಹ ನಡೆಸುತ್ತಿದ್ದಾಗ ಬಂಧನಕ್ಕೊಳಗಾದ ಕಾಂತ ಅವರು ಜೈಲು ಕೂಡ ಸೇರಿದ್ದರು.

ರೈತರು, ಸಿಮೆಂಟ್ ಕಾರ್ಖಾನೆ ಕಾರ್ಮಿಕರು, ಪರಿಶಿಷ್ಟ ವರ್ಗದವರು ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಟದ ಮುಂಚೂಣಿಯಲ್ಲಿರುವ ಎಸ್.ಕೆ. ಕಾಂತ ಅವರು ಕಲಬುರಗಿಯಲ್ಲಿ ಕೆರೆಗಳ ಒತ್ತುವರಿ, ಸರಕಾರಿ ಭೂಮಿ ಅತಿಕ್ರಮಣ, ವಕ್ಫ್ ಆಸ್ತಿಯ ಅತಿಕ್ರಮಣದ ವಿರುದ್ಧ ಹೋರಾಟ ನಡೆಸುತ್ತಿದ್ದಾರೆ. ದಲಿತ ಚಳವಳಿ, ರೈತ ಚಳವಳಿ, ಗೋಕಾಕ್ ಚಳವಳಿಯಲ್ಲೂ ಸಕ್ರಿಯರಾಗಿದ್ದವರು.

ಶಾಸಕರಾಗಿ, ಕಾರ್ಮಿಕ ಸಚಿವರಾಗಿ ಸಾರ್ವಜನಿಕ ಸೇವೆಯಲ್ಲಿದ್ದವರೂ ಈಗಲೂ ಬಾಡಿಗೆ ಮನೆಯಲ್ಲಿ ಜೀವನ ನಡೆಸುತ್ತಿರುವ ಎಸ್.ಕೆ. ಕಾಂತ ಅವರು 86ರ ಇಳಿ ವಯಸ್ಸಿನಲ್ಲೂ ಸಾರ್ವಜನಿಕರ ಸಮಸ್ಯೆಗಳಿಗಾಗಿ ದನಿ ಎತ್ತುವ ಚೈತನ್ಯ ಕುಗ್ಗದಿರುವುದು ಅವರ ಹೋರಾಟದ ಬದ್ಧತೆಯನ್ನು ತೋರಿಸುತ್ತದೆ.

ಭಾರತ ಕ್ರಿಕೆಟ್ ತಂಡದ ಬೌಲಿಂಗ್ ಕೋಚ್ ಆಗಿ ಯಾವ ದೇಶದ ಆಟಗಾರರನ್ನು ಆಯ್ಕೆ ಮಾಡಲಾಗಿದೆ?

a) ದಕ್ಷಿಣ ಆಫ್ರಿಕಾ
b) ಇಂಗ್ಲೆಂಡ್
c) ಆಸ್ಟ್ರೇಲಿಯಾ
d) ನ್ಯೂಜಿಲೆಂಡ್

ಉತ್ತರ: a)

# ಮಾರ್ಕೆಲ್ ಭಾರತದ ಬೌಲಿಂಗ್ ಕೋಚ್

## ಬಾಂಗ್ಲಾದೇಶ ಸರಣಿಯಿಂದ ಕಾರ್ಯಾರಂಭ

**ಹೊಸದಿಲ್ಲಿ:** ದಕ್ಷಿಣ ಆಫ್ರಿಕಾದ ಮಾಜಿ ವೇಗದ ಬೌಲರ್ ಮಾರ್ನೆ ಮಾರ್ಕೆಲ್ ಭಾರತ ಕ್ರಿಕೆಟ್ ತಂಡದ ನೂತನ ಬೌಲಿಂಗ್ ಕೋಚ್ ಆಗಿ ನೇಮಕಗೊಂಡಿದ್ದಾರೆ ಎಂದು ಬಿಸಿಸಿಐ ಕಾರ್ಯದರ್ಶಿ ಜಯ್ ಶಾ ಬುಧವಾರ ತಿಳಿಸಿದ್ದಾರೆ.

ಪರಾಸ್ ಮಾಂಬ್ರೆ ಅವರ ಸ್ಥಾನವನ್ನು ತುಂಬಲಿರುವ 39 ವರ್ಷದ ಮಾರ್ಕೆಲ್, ಸೆಪ್ಟೆಂಬರ್ 19ರಿಂದ ಚೆನ್ನೈನಲ್ಲಿ ಪ್ರಾರಂಭವಾಗುವ ಬಾಂಗ್ಲಾದೇಶ ಸರಣಿಯಿಂದ ಬೌಲಿಂಗ್ ಕೋಚ್ ಆಗಿ ಅಧಿಕಾರ ವಹಿಸಿಕೊಳ್ಳಲಿದ್ದಾರೆ ಎಂದು ತಿಳಿದುಬಂದಿದೆ. ದಕ್ಷಿಣ ಆಫ್ರಿಕಾದಲ್ಲಿ ನಡೆಯಲಿರುವ 2027ರ ಏಕದಿನ ವಿಶ್ವಕಪ್ ಅಂತ್ಯದವರೆಗೆ ಅವರನ್ನು ನೇಮಕ ಮಾಡಲಾಗಿದೆ. ಈ ಕುರಿತು ಸ್ಪಷ್ಟಪಡಿಸಿರುವ ಜಯ್ ಶಾ, ''ಹೌದು, ಮಾರ್ನೆ ಮಾರ್ಕೆಲ್ ಅವರನ್ನು ಭಾರತದ ಹಿರಿಯ ಪುರುಷರ ತಂಡದ ಬೌಲಿಂಗ್ ಕೋಚ್ ಆಗಿ ನೇಮಿಸಲಾಗಿದೆ,'' ಎಂದು ತಿಳಿಸಿದ್ದಾರೆ. ಗಂಭೀರ್ ಅವರ ಸಹಾಯಕ ಸಿಬ್ಬಂದಿಯಲ್ಲಿ ಸಹಾಯಕ ಕೋಚ್ ಅಭಿಷೇಕ್ ನಾಯರ್ ಮತ್ತು ಫೀಲ್ಡಿಂಗ್ ಕೋಚ್ ರಯಾನ್ ಟೆನ್ ಡೆಸ್ಕಾಟೆ ಇದ್ದಾರೆ.



ಭಾರತದ ಎರಡು ಐಪಿಎಲ್ ಋತುಗಳಲ್ಲಿ ಲಖನೌ ಸೂಪರ್ ಜಯಂಟ್ಸ್‌ನಲ್ಲಿ ಫ್ರಾಂಚೈಸಿಯ ಮಾರ್ಗದರ್ಶಕರಾಗಿ ಕೆಲಸ ಮಾಡಿದ ಮಾರ್ಕೆಲ್, ಗಂಭೀರ್ ಅವರ ಆದ್ಯತೆಯ ಆಯ್ಕೆಯಾಗಿದ್ದರು. ಮಾರ್ಕೆಲ್ ದಕ್ಷಿಣ ಆಫ್ರಿಕಾ ಪರ 86 ಟೆಸ್ಟ್, 117 ಏಕದಿನ ಮತ್ತು 44 ಟಿ20 ಪಂದ್ಯಗಳನ್ನು ಆಡಿದ್ದಾರೆ. ಮಾರ್ಕೆಲ್ ಮುಂದಿನ ತಿಂಗಳ ಆರಂಭದಲ್ಲಿ ಬೆಂಗಳೂರಿನ ರಾಷ್ಟ್ರೀಯ ಕ್ರಿಕೆಟ್ ಅಕಾಡೆಮಿಯಲ್ಲಿ ವರದಿ ಮಾಡಿಕೊಳ್ಳಲಿದ್ದಾರೆ. ಈ ವೇಳೆ ಅವರು ದುಲೀಪ್ ಟ್ರೋಫಿ ಪಂದ್ಯಗಳನ್ನು ವೀಕ್ಷಿಸುವ ನಿರೀಕ್ಷೆಯಿದೆ. ಮೂಲಗಳ ಪ್ರಕಾರ, ಲಕ್ಷ್ಮಿಪತಿ ಬಾಲಾಜಿ ಮತ್ತು ಆರ್. ವಿನಯ್ ಕುಮಾರ್ ಅವರಂತಹ ಇತರ ಆಯ್ಕೆಗಳಿಗಿಂತ ಮುಂಚಿತವಾಗಿ ಗಂಭೀರ್ ಅವರ ಶಿಫಾರಸಿನ ಮೇರೆಗೆ ಮಾರ್ಕೆಲ್ ಅವರನ್ನು ನೇಮಿಸಲಾಗಿದೆ.

ಮಾರ್ಕೆಲ್ ಕಳೆದ ವರ್ಷ ಏಕದಿನ ವಿಶ್ವಕಪ್ ಮುಗಿಯುವವರೆಗೂ ಪಾಕಿಸ್ತಾನ ತಂಡದೊಂದಿಗೆ ಕೆಲಸ ಮಾಡಿದ್ದರು. ಆದರೆ ಅವರ ಒಪ್ಪಂದದ ಅವಧಿ ಮುಗಿಯುವ ಮೊದಲು ರಾಜೀನಾಮೆ ನೀಡಿದ್ದರು.

## ಕೀನ್ಯಾಗೆ ದೊಡ್ಡ ಗಣೇಶ್ ಕೋಚ್

**ನೈರೋಬಿ:** 2026ರ ಟಿ20 ವಿಶ್ವಕಪ್ ಟೂರ್ನಿಯ ಅರ್ಹತೆಗೆ ನಡೆಸಲಾಗುತ್ತಿರುವ ಆಫ್ರಿಕಾ ಕ್ವಾಲಿಫೈಯರ್ ಪಂದ್ಯಗಳಿಗೆ ಮುನ್ನ ಭಾರತದ ಮಾಜಿ ಆಲ್‌ರೌಂಡರ್ ಹಾಗೂ ಕನ್ನಡಿಗ ದೊಡ್ಡ ಗಣೇಶ್ ಅವರನ್ನು ಕೀನ್ಯಾ ಪುರುಷರ ಕ್ರಿಕೆಟ್ ತಂಡದ ಮುಖ್ಯ ಕೋಚ್ ಆಗಿ ನೇಮಿಸಲಾಗಿದೆ.

ನಾಲ್ಕು ಟೆಸ್ಟ್ ಮತ್ತು ಒಂದು ಏಕದಿನ ಪಂದ್ಯ ಆಡಿರುವ ಗಣೇಶ್, ಪ್ರಥಮ ದರ್ಜೆ ಕ್ರಿಕೆಟ್‌ನಲ್ಲಿ 2000ಕ್ಕೂ ಹೆಚ್ಚು ರನ್ ಮತ್ತು 365 ವಿಕೆಟ್‌ಗಳನ್ನು ಪಡೆದಿದ್ದಾರೆ. 51 ವರ್ಷದ ಗಣೇಶ್, 1996ರಿಂದ 2011ರ ನಡುವೆ ಐದು ವಿಶ್ವಕಪ್‌ಗಳಲ್ಲಿ ಸ್ಪರ್ಧಿಸಿರುವ ಕೀನ್ಯಾ ಕ್ರಿಕೆಟ್ ತಂಡವನ್ನು ಉನ್ನತ ಸ್ಥಾನಕ್ಕೇರಿಸುವ ಜವಾಬ್ದಾರಿಯನ್ನು ನಿಭಾಯಿಸಬೇಕಿದೆ. 2007ರಲ್ಲಿ ನಡೆದ ಟಿ20 ವಿಶ್ವಕಪ್‌ನಲ್ಲಿ ಕೀನ್ಯಾ ಕೇವಲ ಒಂದು ಆವೃತ್ತಿಗೆ ಅರ್ಹತೆ ಪಡೆದಿದೆ. ಅಂದಿನಿಂದ, ಕೀನ್ಯಾ ಕ್ರಿಕೆಟ್ ಬೆಳವಣಿಗೆ ಕುಂಟುತ್ತ ಸಾಗಿದೆ. ಸೆಪ್ಟೆಂಬರ್‌ನಲ್ಲಿ ನಡೆಯಲಿರುವ ಐಸಿಸಿ ಡಿವಿಷನ್ 2 ಚಾಲೆಂಜ್ ಲೀಗ್‌ನಲ್ಲಿ ಪಪುವಾ ನ್ಯೂ ಗಿನಿಯಾ, ಕತಾರ್, ಡೆನ್ಮಾರ್ಕ್ ಮತ್ತು ಜರ್ಸಿ ಮತ್ತು ಅಕ್ಟೋಬರ್‌ನಲ್ಲಿ ನಡೆಯಲಿರುವ ಟಿ20 ವಿಶ್ವಕಪ್ ಆಫ್ರಿಕಾ ಕ್ವಾಲಿಫೈಯರ್‌ನಲ್ಲಿ ಕೀನ್ಯಾ ಸೆಣಸಲಿದೆ. ಪುರುಷರ 2026ರ ಟಿ20 ವಿಶ್ವಕಪ್ ಟೂರ್ನಿಗೆ ಭಾರತ ಮತ್ತು ಶ್ರೀಲಂಕಾ ಜಂಟಿ ಆತಿಥ್ಯ ವಹಿಸಲಿವೆ.

ನೇಮಕ ಕುರಿತು ಪ್ರತಿಕ್ರಿಯಿಸಿರುವ ಗಣೇಶ್, ''ಹೊಸ ಪಾತ್ರವನ್ನು ಎದುರು ನೋಡುತ್ತಿದ್ದೇನೆ,'' ಎಂದಿದ್ದಾರೆ.

**ಕನ್ನಡಿಗನಿಗೆ ದೊರೆತ ಗೌರವ**



ಕೀನ್ಯಾ ಕ್ರಿಕೆಟ್ ತಂಡದ ಮುಖ್ಯ ಕೋಚ್ ಆಗಿ ನೇಮಕಗೊಂಡಿರುವುದು ನನ್ನ ಸೌಭಾಗ್ಯ.

**- ದೊಡ್ಡ ಗಣೇಶ್**
ಟೀಮ್ ಇಂಡಿಯಾದ ಮಾಜಿ ಕ್ರಿಕೆಟಿಗ

ಭಾರತ ಮತ್ತು ಯಾವ ಇನ್ನೊಂದು ದೇಶ ಅಪರೂಪದ ಖನಿಜಗಳ ಶೋಧ ಮತ್ತು ಪೂರೈಕೆಗಾಗಿ ಪಾಲುದಾರಿಕೆ ಒಪ್ಪಂದಕ್ಕೆ ಸಹಿ ಹಾಕಿವೆ?

a) ಫ್ರಾನ್ಸ್
b) ಅಮೇರಿಕಾ
c) ಮೆಕ್ಸಿಕೋ
d) ಆಸ್ಟ್ರೇಲಿಯಾ

ಉತ್ತರ: b)

1) ಭಾರತ ಮತ್ತು ಯಾವ ಇನ್ನೊಂದು ದೇಶ ಅಪರೂಪದ ಖನಿಜಗಳ ಶೋಧ ಮತ್ತು ಪೂರೈಕೆಗಾಗಿ ಪಾಲುದಾರಿಕೆ ಒಪ್ಪಂದಕ್ಕೆ ಸಹಿ ಹಾಕಿವೆ?

ಎ) ಫ್ರಾನ್ಸ್ ಬಿ) ಅಮೆರಿಕ

ಸಿ) ಮೆಕ್ಸಿಕೊ ಡಿ) ಆಸ್ಟ್ರೇಲಿಯಾ

ಉತ್ತರ: ಬಿ) ಅಮೆರಿಕ

- ವಿವರಣೆ: ಗ್ರಾಫೈಟ್, ಗಾಲಿಯಂ ಮತ್ತು ಜೆರ್ಮೆನಿಯಂಗಳಂತಹ ಅಪರೂಪದ ಖನಿಜಗಳ ಶೋಧ ಮತ್ತು ಪೂರೈಕೆಯ ಉದ್ದೇಶದಿಂದ ಭಾರತ ಮತ್ತು ಅಮೆರಿಕ ಜೂನ್‌ನಲ್ಲಿ ಪಾಲುದಾರಿಕೆ ಒಪ್ಪಂದಕ್ಕೆ ಸಹಿ ಹಾಕಿದವು. ಉಭಯ ದೇಶಗಳ ರಾಷ್ಟ್ರೀಯ ಭದ್ರತಾ ಸಲಹೆಗಾರರ ಉಪಸ್ಥಿತಿಯಲ್ಲಿ ಇಂಡಿಯಾ – ಯು.ಎಸ್. ಇನಿಷಿಯೇಟಿವ್ ಫಾರ್ ಕ್ರಿಟಿಕಲ್ ಆ್ಯಂಡ್ ಎಮರ್ಜಿಂಗ್ ಟೆಕ್ನಾಲಜಿ ಮಾತುಕತೆಗಳು ನಡೆದವು.
- ಭಾರತದ 'ಖನಿಜ್ ಬಿದೇಶ್ ಇಂಡಿಯಾ ಲಿಮಿಟೆಡ್' ಸದ್ಯ ಆಸ್ಟ್ರೇಲಿಯಾ, ಅರ್ಜೆಂಟೈನಾ ಮತ್ತು ಚಿಲಿ ದೇಶಗಳಲ್ಲಿ ಲಿಥಿಯಂ ಮತ್ತು ಕೋಬಾಲ್ಟ್ ನಿಕ್ಷೇಪಗಳಿವೆಯೇ ಎಂಬುದರ ಕುರಿತು ಅಧ್ಯಯನ ಮತ್ತು ಶೋಧ ಕಾರ್ಯ ನಡೆಸುತ್ತಿದೆ.

70 ನೇ ರಾಷ್ಟ್ರೀಯ ಸಿನಿಮಾ ಪ್ರಶಸ್ತಿ ಪೈಕಿ ಯಾರಿಗೆ ಅತ್ಯುತ್ತಮ ನಟ ಪ್ರಶಸ್ತಿ ಸಿಕ್ಕಿದೆ ?

a) ರಿಶಬ್ ಶೆಟ್ಟಿ
b) ಜೂನಿಯರ್ NTR
c) ಮೋಹನಲಾಲ್
d) ಚಿರಂಜೀವಿ

ಉತ್ತರ:–a)

## ಕನ್ನಡಕ್ಕೆ 7 ರಾಷ್ಟ್ರೀಯ ಸಿನಿಮಾ ಪ್ರಶಸ್ತಿ

# ರಿಷಬ್ ಬೆಸ್ಟ್ ನಟ

## ಕಾಂತಾರ ಅತ್ಯುತ್ತಮ ಪ್ರಾದೇಶಿಕ ಸಿನಿಮಾ

## ಯಶ್ ಕೆಜಿಎಫ್-2 ಅತ್ಯುತ್ತಮ ಕನ್ನಡ ಚಿತ್ರ

ನವದೆಹಲಿ: ಕೇಂದ್ರ ಸರ್ಕಾರ ನೀಡುವ ಪ್ರತಿಷ್ಠಿತ ರಾಷ್ಟ್ರೀಯ ಸಿನಿಮಾ ಪ್ರಶಸ್ತಿಗಳಲ್ಲಿ ಕನ್ನಡದ ಬ್ಲಾಕ್ ಬಸ್ಟರ್ ಚಿತ್ರ 'ಕಾಂತಾರ'ದಲ್ಲಿನ ಅಭಿನಯಕ್ಕಾಗಿ ಖ್ಯಾತ ನಟ ರಿಷಬ್ ಶೆಟ್ಟಿ ಅತ್ಯುತ್ತಮ ನಟ ಪ್ರಶಸ್ತಿ ಪಡೆದುಕೊಂಡಿದ್ದಾರೆ. ಅವರು ನಿರ್ದೇಶಿಸಿ ಅಭಿನಯಿಸಿದ 'ಕಾಂತಾರ' ಚಿತ್ರವು ಪ್ರಾದೇಶಿಕ ವಿಭಾಗದಲ್ಲಿ 'ಅತ್ಯುತ್ತಮ ಮನರಂಜನಾ ಚಿತ್ರ' ಪ್ರಶಸ್ತಿಯನ್ನೂ ಪಡೆದುಕೊಂಡಿದೆ.

ರಿಷಬ್ ಶೆಟ್ಟಿ ಅವರಿಗೆ ಸಂದಿರುವ ಅತ್ಯುತ್ತಮ ನಟ ಪ್ರಶಸ್ತಿಯು ಕನ್ನಡ ಚಿತ್ರರಂಗಕ್ಕೆ ಈ ವಿಭಾಗದಲ್ಲಿ ರಾಷ್ಟ್ರಮಟ್ಟದಲ್ಲಿ ಲಭಿಸಿದ ನಾಲ್ಕನೇ ಪ್ರಶಸ್ತಿಯಾಗಿದೆ.

2022ನೇ ಸಾಲಿನ ರಾಷ್ಟ್ರೀಯ ಸಿನಿಮಾ ಪ್ರಶಸ್ತಿಗಳು ಶುಕ್ರವಾರ ಪ್ರಕಟಗೊಂಡಿವೆ. ಅವುಗಳಲ್ಲಿ ಕನ್ನಡಕ್ಕೆ ಒಟ್ಟು ಏಳು ಪ್ರಶಸ್ತಿಗಳು ಲಭಿಸಿವೆ. ರಾಷ್ಟ್ರಮಟ್ಟದಲ್ಲಿ ರಿಷಬ್‌ಗೆ ಅತ್ಯುತ್ತಮ ನಟ ಪ್ರಶಸ್ತಿ ಲಭಿಸಿದೆ. ➘ 8

| | |
|---|---|
| ರಿಷಬ್ ಶೆಟ್ಟಿ | ಅತ್ಯುತ್ತಮ ನಟ |
| ಕಾಂತಾರ | ಅತ್ಯುತ್ತಮ ಮನರಂಜನಾ ಸಿನಿಮಾ |
| ಕೆಜಿಎಫ್-2 | ಅತ್ಯುತ್ತಮ ಕನ್ನಡ ಚಿತ್ರ |
| ಅನ್ಬರಿವ್ | ಅತ್ಯುತ್ತಮ ಸಾಹಸ ನಿರ್ದೇಶನ (ಕೆಜಿಎಫ್-2) |
| ಬಸ್ತಿ ಶೆಣೈ | ನಾನ್ ಫೀಚರ್ ಚೊಚ್ಚಲ ನಿರ್ದೇಶನ (ಮಧ್ಯಂತರ) |
| ಸುನೀಲ್ ಪುರಾಣಿಕ್ | ಕಲೆ ಮತ್ತು ಸಂಸ್ಕೃತಿ ಪ್ರಶಸ್ತಿ (ರಂಗ ವೈಭೋಗ) |
| ಸುರೇಶ್ ಅರಸ್ | ಸಂಕಲನ ಪುರಸ್ಕಾರ (ಮಧ್ಯಂತರ) |

**ಆಟ್ಟಂ ಅತ್ಯುತ್ತಮ ಚಿತ್ರ: ನಿತ್ಯಾ ಮೆನನ್, ಮಾನಸಿ ಅತ್ಯುತ್ತಮ ನಟಿಯರು** ➘ 9

### ಹೊಣೆಗಾರಿಕೆ ಹೆಚ್ಚಾಗಿದೆ

ಪ್ರಶಸ್ತಿಯನ್ನು ದೈವಕ್ಕೆ, 'ಕಾಂತಾರ' ಚಿತ್ರತಂಡಕ್ಕೆ, ದೈವ ನರ್ತಕರಿಗೆ ಹಾಗೂ ಪುನೀತ್ ರಾಜ್‌ಕುಮಾರ್ ಅವರಿಗೆ ಅರ್ಪಿಸುತ್ತೇನೆ. ಈ ಪ್ರಶಸ್ತಿಯಿಂದ ಹೊಣೆಗಾರಿಕೆ ಹೆಚ್ಚಿದೆ.

• ರಿಷಬ್ ಶೆಟ್ಟಿ



### ಇದು ಕನ್ನಡ ಮಿಂಚಿದ ಕ್ಷಣ

ಇದು ಕನ್ನಡ ಸಿನಿಮಾಗಳು ರಾಷ್ಟ್ರಮಟ್ಟದಲ್ಲಿ ಮಿಂಚಿದ ಕ್ಷಣ. ರಿಷಬ್ ಶೆಟ್ಟಿಗೆ ಅಭಿನಂದನೆ. ಕೆಜಿಎಫ್ ಚಿತ್ರಕ್ಕೆ ಪ್ರಶಸ್ತಿ ಬಂದದ್ದು ಸಂತೋಷ ಕೊಟ್ಟಿದೆ. ಇದು ಇಡೀ ತಂಡದ ಶ್ರಮದ ಫಲ.

• ಯಶ್



## 70ನೇ ಅಂತಾರಾಷ್ಟ್ರೀಯ ಪ್ರಶಸ್ತಿಗಳ ಪಟ್ಟಿ

- ಅತ್ಯುತ್ತಮ ಸಿನಿಮಾ: ಆಟಂ (ಮಲೆಯಾಳಂ)
- ಅತ್ಯುತ್ತಮ ನಟ: ರಿಷಬ್ ಶೆಟ್ಟಿ (ಕಾಂತಾರ-ಕನ್ನಡ)
- ಅತ್ಯುತ್ತಮ ನಟಿ: ನಿತ್ಯಾ ಮೆನನ್ (ತಿರುಚಿತ್ರಬಲಂ-ತಮಿಳು)
- ಅತ್ಯುತ್ತಮ ನಟಿ: ಮಾನಸಿ ಪಾರೇಖ್ (ಕಚ್ ಎಕ್ಸ್‌ಪ್ರೆಸ್-ಗುಜರಾತಿ)
- ಅತ್ಯುತ್ತಮ ಮನರಂಜನಾತ್ಮಕ ಸಿನಿಮಾ: ಕಾಂತಾರ (ಕನ್ನಡ)
- ಅತ್ಯುತ್ತಮ ಕನ್ನಡ ಸಿನಿಮಾ: ಕೆಜಿಎಫ್-2 (ಕನ್ನಡ)
- ಅತ್ಯುತ್ತಮ ನಿರ್ದೇಶಕ: ಸೂರಜ್ ಬರ್ಜಾತಿಯಾ (ಊಂಚಾಯಿ)
- ಅತ್ಯುತ್ತಮ ಸಾಮಾಜಿಕ ಸಂದೇಶ ಸಿನಿಮಾ: ಕಚ್ ಎಕ್ಸ್‌ಪ್ರೆಸ್ (ಗುಜರಾತಿ)
- ತೀರ್ಪುಗಾರರ ವಿಶೇಷ ಪ್ರಶಸ್ತಿ: ಮನೋಜ್ ಬಾಜ್ಪೇಯಿ (ಗುಲ್‌ಮೋಹರ್-ಹಿಂದಿ)
- ಅತ್ಯುತ್ತಮ ಸಾಹಸ ನಿರ್ದೇಶನ: ಅನ್ಬರಿವ್ (ಕೆಜಿಎಫ್-2 ಕನ್ನಡ)
- ಅತ್ಯುತ್ತಮ ನೃತ್ಯ: ಜಾನಿ ಮಾಸ್ಟರ್-ಸತೀಶ್ (ತಿರುಚಿತ್ರಂಬಳಂ-ತಮಿಳು)
- ಅತ್ಯುತ್ತಮ ಸಾಹಿತ್ಯ: ನೌಶದ್ ಸಾದರ್ ಖಾನ್ (ಫೌಜಾ-ಹರಿಯಾಣ)
- ಅತ್ಯುತ್ತಮ ಸಂಗೀತ ನಿರ್ದೇಶನ: ಪ್ರೀತಂ (ಬ್ರಹ್ಮಾಸ್ತ್ರ-ಹಿಂದಿ)
- ಅತ್ಯುತ್ತಮ ಹಿನ್ನೆಲೆ ಸಂಗೀತ: ಎ.ಆರ್.ರೆಹಮಾನ್ (ಪೊನ್ನಿಯಿನ್ ಸೆಲ್ವನ್ 1)
- ಅತ್ಯುತ್ತಮ ಚಿತ್ರಕಥೆ: ಆನಂದ್ ಏಕರ್ಷಿ (ಆಟಂ-ಮಲೆಯಾಳಂ)
- ಅತ್ಯುತ್ತಮ ಸಂಭಾಷಣೆ: ಅರ್ಪಿತಾ-ರಾಹುಲ್ (ಗುಲ್‌ಮೋಹರ್-ಹಿಂದಿ)
- ಅತ್ಯುತ್ತಮ ಗಾಯಕಿ: ಬಾಂಬೆ ಜಯಶ್ರೀ (ಚಾಯುಂ ವೆಲ್ಲಿ, ಸೌದಿ ವೆಲ್ಲಕ ಮಲೆಯಾಳಂ)
- ಅತ್ಯುತ್ತಮ ಗಾಯಕ: ಅರಿಜಿತ್ ಸಿಂಗ್ (ಕೇಸರಿಯಾ-ಬ್ರಹ್ಮಾಸ್ತ್ರ-ಹಿಂದಿ)
- ಅತ್ಯುತ್ತಮ ಬಾಲನಟ: ಶ್ರೀಪತ್ (ಮಲ್ಲಿಕಾಪ್ಪುರಂ-ಮಲಯಾಳಂ)
- ಅತ್ಯುತ್ತಮ ಪೋಷಕ ನಟಿ: ನೀನಾ ಗುಪ್ತಾ (ಊಂಚಾಯಿ-ಹಿಂದಿ)
- ಅತ್ಯುತ್ತಮ ಪೋಷಕ ನಟ: ಪವನ್ ರಾಜ್ ಮಲ್ಹೋತ್ರಾ (ಫೌಜಾ-ಹರಿಯಾಣ)

## ಕೆಳಗಿನ ಯಾರು ಪ್ಯಾರಾ ಒಲಿಂಪಿಕ್ಸ್ ನಲ್ಲಿ ಭಾರತದ ಧ್ವಜ ಧಾರಿ ಆಗಿದ್ದಾರೆ ?

a) ಮನು ಬಾಕರ್

b) ಭಾಗ್ಯಶ್ರೀ

c) ವಿನೆಶ್

d) ನೀರಜ್

ಉತ್ತರ:b)

# ಭಾಗ್ಯಶ್ರೀ, ಸುಮಿತ್ ಭಾರತದ ಧ್ವಜಧಾರಿಗಳು

ಪ್ಯಾರಾಲಿಂಪಿಕ್ ಕ್ರೀಡಾಕೂಟ

**ನವದೆಹಲಿ:** ಪ್ಯಾರಾಲಿಂಪಿಕ್ ಕ್ರೀಡಾಕೂಟ ಆಗಸ್ಟ್ 28 ರಿಂದ ಸೆಪ್ಟೆಂಬರ್ 8 ರವರೆಗೆ ಪ್ಯಾರಿಸ್‌ನಲ್ಲಿ ನಡೆಯಲಿದ್ದು, ಇದಕ್ಕಾಗಿ ಸಿದ್ಧತೆಗಳು ಪೂರ್ಣಗೊಂಡಿವೆ.

ಪ್ಯಾರಾಲಿಂಪಿಕ್ ಕ್ರೀಡಾಕೂಟದ ಉದ್ಘಾಟನಾ ಸಮಾರಂಭ ಆ 28 ರಂದು ನಡೆಯಲಿದ್ದು, ಉದ್ಘಾಟನಾ ಸಮಾರಂಭಕ್ಕೆ ಭಾರತದ ಶಾಟ್‌ಪುಟ್ ತಾರೆ ಭಾಗ್ಯಶ್ರೀ ಜಾಧವ್ ಮತ್ತು ಸ್ಟಾರ್ ಜಾವೆಲಿನ್ ಎಸೆತಗಾರ ಸುಮಿತ್ ಆಂಟಿಲ್ ಧ್ವಜಧಾರಿಗಳಾಗಿ ಆಯ್ಕೆಯಾಗಿದ್ದಾರೆ.

ಪ್ಯಾರಾಲಿಂಪಿಕ್ಸ್‌ನಲ್ಲಿ 84 ಭಾರತೀಯ ಕ್ರೀಡಾಪಟುಗಳು ಪಾಲ್ಗೊಳ್ಳಲಿದ್ದು, ಉದ್ಘಾಟನಾ ಸಮಾರಂಭದಲ್ಲಿ ನಡೆಯಲಿರುವ



ಪಥಚಲನದಲ್ಲಿ ಭಾಗ್ಯಶ್ರೀ ಜಾಧವ್ ಹಾಗೂ ಸುಮಿತ್ ಆಂಟಿಲ್ ಧ್ವಜಧಾರಿಗಳಾಗಲಿದ್ದಾರೆ.

## ಪದಕ ನಿರೀಕ್ಷೆಯಲ್ಲಿ ಭಾಗ್ಯಶ್ರೀ

ಭಾಗ್ಯಶ್ರೀ ಜಾಧವ್ ಮಹಾರಾಷ್ಟ್ರದ ಮೂಲದವರು. ಅಂತಾರಾಷ್ಟ್ರೀಯ ಮಟ್ಟದ ಶಾಟ್‌ಪುಟ್ ಸ್ಪರ್ಧೆಯಲ್ಲಿ ನಿರಂತರವಾಗಿ ಉತ್ತಮ ಪ್ರದರ್ಶನ ನೀಡುತ್ತಿರುವ ಭಾಗ್ಯಶ್ರೀ, 2022ರ ಏಷ್ಯನ್ ಪ್ಯಾರಾ ಗೇಮ್ಸ್‌ನಲ್ಲಿ ಶಾಟ್‌ಪುಟ್ ಎಫ್34 ವಿಭಾಗದಲ್ಲಿ ಬೆಳ್ಳಿ ಪದಕವನ್ನು ಗೆದ್ದರೆ, ಟೋಕಿಯೊ ಪ್ಯಾರಾಲಿಂಪಿಕ್ಸ್‌ನಲ್ಲಿ 7ನೇ ಸ್ಥಾನಕ್ಕೆ ತೃಪ್ತಿಪಟ್ಟಿದ್ದಾರೆ. ತಮ್ಮ ಕ್ರೀಡಾ ಪ್ರಯಾಣವನ್ನು 2017ರಲ್ಲಿ ಆರಂಭಿಸಿದ ಭಾಗ್ಯಶ್ರೀ, ಫೆಝಾ ವಿಶ್ವಕಪ್ ಮತ್ತು ವಿಶ್ವ ಪ್ಯಾರಾ ಅಥ್ಲೆಟಿಕ್ಸ್ ಗೇಮ್ಸ್ ಸೇರಿದಂತೆ ವಿವಿಧ ಅಂತರರಾಷ್ಟ್ರೀಯ ಪಂದ್ಯಗಳಲ್ಲಿ ಪದಕಗಳನ್ನು ಗೆಲ್ಲುವ ಮೂಲಕ ಗಮನ ಸೆಳೆಯುತ್ತ ಬಂದಿದ್ದಾರೆ. ಇದೀಗ ಪ್ಯಾರಿಸ್ ಪ್ಯಾರಾಲಿಂಪಿಕ್‌ನಲ್ಲಿ ಕೂಡ ಭಾಗ್ಯಶ್ರೀ ಪದಕ ಗೆಲ್ಲುವ ನಿರೀಕ್ಷೆಯಲ್ಲಿದ್ದಾರೆ.

## ಚಿನ್ನದ ಮೇಲೆ ಸುಮಿತ್ ಕಣ್ಣು

ಭಾರತದ ಪ್ರಮುಖ ಪ್ಯಾರಾ ಜಾವೆಲಿನ್ ಎಸೆತಗಾರ ಸುಮಿತ್ ಆಂಟಿಲ್ ಎಫ್64 ವಿಭಾಗದಲ್ಲಿ ಪ್ರಸ್ತುತ ವಿಶ್ವ ದಾಖಲೆ ಹೊಂದಿದ್ದಾರೆ.

ಟೋಕಿಯೊ ಪ್ಯಾರಾಲಿಂಪಿಕ್ಸ್ 2020 ರಲ್ಲಿ ವಿಶ್ವ ದಾಖಲೆಯ 68.55 ಮೀಟರ್ ಎಸೆಯುವ ಮೂಲಕ ಚಿನ್ನದ ಪದಕವನ್ನು ಗೆದ್ದ ಸುಮಿತ್, 2023 ರ ವಿಶ್ವ ಪ್ಯಾರಾ ಅಥ್ಲೆಟಿಕ್ಸ್ ಚಾಂಪಿಯನ್‌ಶಿಪ್‌ನಲ್ಲಿ ಚಿನ್ನದ ಪದಕವನ್ನು ಗೆಲ್ಲುವ ಮೂಲಕ ನೂತನ ದಾಖಲೆ ಸ್ಥಾಪಿಸಿದರು.

ಇದಕ್ಕೂ ಮುನ್ನ 2022 ರ ಏಷ್ಯನ್ ಪ್ಯಾರಾ ಗೇಮ್ಸ್‌ನಲ್ಲಿ 73.29 ಮೀಟರ್ ದೂರ ಜಾವೆಲಿನ್ ಎಸೆಯುವ ಮೂಲಕ ಹೊಸ ವಿಶ್ವ ದಾಖಲೆಯನ್ನು ಸೃಷ್ಟಿಸಿದ್ದರು.

ಟೋಕಿಯೊ ಪ್ಯಾರಾಲಿಂಪಿಕ್ ಕ್ರೀಡಾಕೂಟದಲ್ಲಿ ಭಾರತ 19 ಪದಕಗಳನ್ನು ಗೆದ್ದಿತ್ತು, ಈಗ



ಪ್ಯಾರಿಸ್‌ನಲ್ಲಿ ಭಾರತದ ಗುರಿ ಹೆಚ್ಚು ಪದಕಗಳನ್ನು ಗೆಲ್ಲುವ ಕಡೆ ಇದೆ.

2020ರ ಟೋಕಿಯೊ ಪ್ಯಾರಾಲಿಂಪಿಕ್ಸ್ 54 ಸದಸ್ಯರ ತಂಡವನ್ನು ಕಳುಹಿಸಿದ್ದ ಭಾರತ, ಪ್ಯಾರಿಸ್ ಪ್ಯಾರಾಲಿಂಪಿಕ್ಸ್‌ನಲ್ಲಿ ಭಾರತದ 84 ಕ್ರೀಡಾಪಟುಗಳು ಪಾಲ್ಗೊಳ್ಳುತ್ತಿದ್ದಾರೆ.

Bangalore Edition Edition

**ಕೇಂದ್ರ ಜಲ ಆಯೋಗ (CWC) ಅಭಿವೃದ್ಧಿಪಡಿಸಿದ 'ಫ್ಲಡ್ ವಾಚ್ ಇಂಡಿಯಾ 2.0 ಆಪ್' ಅನ್ನು ಇತ್ತೀಚೆಗೆ ಯಾವ ಸಚಿವಾಲಯ ಬಿಡುಗಡೆ ಮಾಡಿದೆ?**

a) ಎ) ಗ್ರಾಮೀಣಾಭಿವೃದ್ಧಿ ಸಚಿವಾಲಯ
b) ಬಿ) ಕೃಷಿ ಸಚಿವಾಲಯ
c) ಸಿ) ಜಲ ಶಕ್ತಿ ಸಚಿವಾಲಯ
d) ಡಿ) ನಗರಾಭಿವೃದ್ಧಿ ಸಚಿವಾಲಯ

**ಸರಿಯಾದ ಉತ್ತರ: C)**

ಕೇಂದ್ರ ಜಲ ಆಯೋಗದ (CWC) 'ಫ್ಲಡ್‌ವಾಚ್ ಇಂಡಿಯಾ' ಮೊಬೈಲ್ ಅಪ್ಲಿಕೇಶನ್‌ನ ಆವೃತ್ತಿ 2.0 ಅನ್ನು ಕೇಂದ್ರ ಜಲ ಶಕ್ತಿ ಸಚಿವರು ಬಿಡುಗಡೆ ಮಾಡಿದರು.

ಅಪ್ಲಿಕೇಶನ್ ನೈಜ-ಸಮಯದ ಪ್ರವಾಹ ಮಾಹಿತಿ ಮತ್ತು 7-ದಿನದ ಮುನ್ಸೂಚನೆಗಳನ್ನು ಸಾರ್ವಜನಿಕರಿಗೆ ಇಂಗ್ಲಿಷ್ ಮತ್ತು ಹಿಂದಿಯಲ್ಲಿ ಓದಬಲ್ಲ ಮತ್ತು ಆಡಿಯೊ ಸ್ವರೂಪಗಳೊಂದಿಗೆ ಒದಗಿಸುತ್ತದೆ.

ಬಳಕೆದಾರರು ನೈಜ-ಸಮಯದ ನದಿ ಹರಿವಿನ ಡೇಟಾವನ್ನು ಬಳಸಿಕೊಂಡು ದೇಶದಾದ್ಯಂತ ಪ್ರವಾಹ ಪರಿಸ್ಥಿತಿಗಳನ್ನು ಮೇಲ್ವಿಚಾರಣೆ ಮಾಡಬಹುದು ಮತ್ತು ಹತ್ತಿರದ ನಿಲ್ದಾಣಗಳಲ್ಲಿ ಪ್ರವಾಹ ಮುನ್ಸೂಚನೆಗಳನ್ನು ಪಡೆಯಬಹುದು.

ಅಪ್ಲಿಕೇಶನ್ ಉಪಗ್ರಹ ಡೇಟಾ ವಿಶ್ಲೇಷಣೆ ಮತ್ತು ಗಣಿತದ ಮಾಡೆಲಿಂಗ್‌ನಂತಹ ಸುಧಾರಿತ ತಂತ್ರಜ್ಞಾನಗಳನ್ನು ಒಳಗೊಂಡಿದೆ.

ಆವೃತ್ತಿ 2.0 392 ಹೆಚ್ಚಿನ ಪ್ರವಾಹ ಮೇಲ್ವಿಚಾರಣಾ ಕೇಂದ್ರಗಳನ್ನು ಸೇರಿಸುತ್ತದೆ, ಒಟ್ಟು 592, ಮತ್ತು 150 ಪ್ರಮುಖ ಜಲಾಶಯಗಳಿಗೆ ಶೇಖರಣಾ ಮಾಹಿತಿಯನ್ನು ಒದಗಿಸುತ್ತದೆ.

**ಇತ್ತೀಚೆಗೆ, DRDO ಮತ್ತು ಭಾರತೀಯ ಸೇನೆಯು ಸ್ಥಳೀಯವಾಗಿ ನಿರ್ಮಿಸಲಾದ ಮ್ಯಾನ್ ಪೋರ್ಟಬಲ್ ಆಂಟಿ-ಟ್ಯಾಂಕ್ ಗೈಡೆಡ್ ಮಿಸೈಲ್ (MPATGM) ಅನ್ನು ಯಾವ ಪ್ರದೇಶದಲ್ಲಿ ಯಶಸ್ವಿಯಾಗಿ ಪರೀಕ್ಷಿಸಿದೆ?**

ಎ) ಪೋರಬಂದರ್, ಗುಜರಾತ್

ಬಿ) ಪೋಖ್ರಾನ್, ರಾಜಸ್ಥಾನ

ಸಿ) ವಿಶಾಖಪಟ್ಟಣಂ, ಆಂಧ್ರಪ್ರದೇಶ

ಡಿ) ನಾಗಪಟ್ಟಣಂ, ತಮಿಳುನಾಡು

ಉತ್ತರ: B)

DRDO ಮತ್ತು ಭಾರತೀಯ ಸೇನೆಯು ಪೋಖ್ರಾನ್ ಫೀಲ್ಡ್ ಫೈರಿಂಗ್ ರೇಂಜ್‌ನಲ್ಲಿ ಮ್ಯಾನ್ ಪೋರ್ಟಬಲ್ ಆಂಟಿ-ಟ್ಯಾಂಕ್ ಗೈಡೆಡ್ ಕ್ಷಿಪಣಿಯನ್ನು ಯಶಸ್ವಿಯಾಗಿ ಪರೀಕ್ಷಿಸಿದೆ.
MPATGM ಎಂಬುದು ಭುಜದಿಂದ ಉಡಾವಣೆ ಮಾಡಲಾದ, ಪೋರ್ಟಬಲ್ ಕ್ಷಿಪಣಿ ವ್ಯವಸ್ಥೆಯಾಗಿದ್ದು, ಶತ್ರು ಟ್ಯಾಂಕ್‌ಗಳು ಮತ್ತು ಶಸ್ತ್ರಸಜ್ಜಿತ ವಾಹನಗಳನ್ನು ಗುರಿಯಾಗಿಸಲು ವಿನ್ಯಾಸಗೊಳಿಸಲಾಗಿದೆ.
ವ್ಯವಸ್ಥೆಯು ಲಾಂಚರ್, ಗುರಿ ಸ್ವಾಧೀನ ವ್ಯವಸ್ಥೆ ಮತ್ತು ಅಗ್ನಿ ನಿಯಂತ್ರಣ ಘಟಕವನ್ನು ಒಳಗೊಂಡಿದೆ.
ಇದು ಸುಧಾರಿತ ಅತಿಗೆಂಪು ಹೋಮಿಂಗ್ ಸಂವೇದಕಗಳು ಮತ್ತು ಸಂಯೋಜಿತ ಏವಿಯಾನಿಕ್ಸ್ ಅನ್ನು ಹೊಂದಿದೆ, ಇದು ಹಗಲು ಮತ್ತು ರಾತ್ರಿ ಕಾರ್ಯಾಚರಣೆಗಳಿಗೆ ಪರಿಣಾಮಕಾರಿಯಾಗಿದೆ.

**ಗ್ಯಾಸ್ಟ್ರೋಡಿಯಾ ಇಂಡಿಕಾ, ಒಂದು ವಿಶಿಷ್ಟವಾದ ಆರ್ಕಿಡ್ ಜಾತಿಯನ್ನು ಸಿಕ್ಕಿಂನ ಯಾವ ಅಭಯಾರಣ್ಯದಲ್ಲಿ ಇತ್ತೀಚೆಗೆ ಕಂಡುಹಿಡಿಯಲಾಯಿತು?**

a) ಕ್ಯೊಂಗ್ನೋಸ್ಲಾ ಆಲ್ಪೈನ್ ಅಭಯಾರಣ್ಯ
b) ಫಾಂಬೊಂಗ್ಲೋ ವನ್ಯಜೀವಿ ಅಭಯಾರಣ್ಯ
c) ಪಂಗೋಲಖಾ ವನ್ಯಜೀವಿ ಅಭಯಾರಣ್ಯ
d) ಶಿಂಗ್ಬಾ ರೋಡೋಡೆಂಡ್ರಾನ್ ಅಭಯಾರಣ್ಯ

**ಉತ್ತರ: B)**

ಗ್ಯಾಸ್ಟ್ರೋಡಿಯಾ ಇಂಡಿಕಾ ಎಂಬ ವಿಶಿಷ್ಟವಾದ ಆರ್ಕಿಡ್ ಪ್ರಭೇದವನ್ನು ಇತ್ತೀಚೆಗೆ ಸಿಕ್ಕಿಂನ ಫಾಂಬೊಂಗ್ಲೋ ವನ್ಯಜೀವಿ ಅಭಯಾರಣ್ಯದಲ್ಲಿ ಕಂಡುಹಿಡಿಯಲಾಯಿತು.

ಇದು ತನ್ನ ಹೂವನ್ನು ಎಂದಿಗೂ ತೆರೆಯದ ಭಾರತದ ಮೊದಲ ಆರ್ಕಿಡ್ ಮತ್ತು ಭಾರತದಲ್ಲಿ ಕಂಡುಬರುವ ಗ್ಯಾಸ್ಟ್ರೋಡಿಯಾ ಕುಲದ ಮೊದಲ ಕ್ಲೈಸ್ಟೋಗಮಸ್ ಜಾತಿಯಾಗಿದೆ.

ಗ್ಯಾಸ್ಟ್ರೋಡಿಯಾ ಇಂಡಿಕಾವು ಹೋಲೋಮೈಕೋಟ್ರೋಫಿಕ್ ಆಗಿದೆ, ಇದು ಕ್ಲೋರೊಫಿಲ್ ಅನ್ನು ಹೊಂದಿರದ ಕಾರಣ ಪೋಷಣೆಗಾಗಿ ಸಂಪೂರ್ಣವಾಗಿ ಶಿಲೀಂಧ್ರಗಳ ಮೇಲೆ ಅವಲಂಬಿತವಾಗಿದೆ.

1,950–2,100 ಮೀಟರ್‌ಗಳಲ್ಲಿ ಕಂಡುಬರುತ್ತದೆ, ಇದು ಮ್ಯಾಗ್ನೋಲಿಯಾ ಮತ್ತು ಏಸರ್‌ನಂತಹ ನಿರ್ದಿಷ್ಟ ಮರಗಳ ಬಳಿ ದಟ್ಟವಾದ, ಕೊಳೆತ ಎಲೆಗಳ ಕಸದಲ್ಲಿ ಬೆಳೆಯುತ್ತದೆ.

ಆವಿಷ್ಕಾರವು ಭಾರತದಲ್ಲಿ ಒಟ್ಟು ಗ್ಯಾಸ್ಟ್ರೋಡಿಯಾ ಜಾತಿಗಳ ಸಂಖ್ಯೆಯನ್ನು 10 ಕ್ಕೆ ತರುತ್ತದೆ, ಆದರೆ ಅದರ ಸೀಮಿತ ಜನಸಂಖ್ಯೆ ಮತ್ತು ನಿರ್ದಿಷ್ಟ ಆವಾಸಸ್ಥಾನದ ಅಗತ್ಯಗಳಿಂದಾಗಿ ಜಾತಿಗಳು ಬೆದರಿಕೆಗಳನ್ನು ಎದುರಿಸುತ್ತಿವೆ.

**41 ವರ್ಷದ ಬಳಿಕ ಭಾರತ ಮತ್ತು ಯಾವ ದೇಶದ ನಡುವೆ ಮಿನಿ ಹಡಗು ಸೇವೆ ಆರಂಭವಾಗಲಿದೆ ?**

a) ಫ್ರಾನ್ಸ್
b) ಅಮೇರಿಕಾ
c) ಬಾಂಗ್ಲಾದೇಶ
d) ಶ್ರೀಲಂಕಾ

**ಉತ್ತರ: D)**

# 41 ವರ್ಷ ಬಳಿಕ ಭಾರತ, ಶ್ರೀಲಂಕಾ ನಡುವೆ ಮಿನಿ ಹಡಗು ಸೇವೆ ಆರಂಭ!

ಕೊಲಂಬೋ: 41 ವರ್ಷದ ಬಳಿಕ ಭಾರತ ಮತ್ತು ಶ್ರೀಲಂಕಾ ನಡುವೆ ಪ್ರಯಾಣಿಕರ ಅನುಕೂಲಕ್ಕಾಗಿ ಮಿನಿ ಹಡಗು ಸೇವೆ ಪುನರಾರಂಭಗೊಂಡಿದೆ. ಈ ಹಡಗು ಸೇವೆ ತಮಿಳುನಾಡಿನ ನಾಗಪಟ್ಟಣಂ ಹಾಗೂ ಶ್ರೀಲಂಕಾದ ಜಾಫ್ನಾದ ಕಂಕಸಂತುರೈ ನಡುವೆ ನಡೆಯಲಿದೆ. ಶಿವಗಂಗೆ ಎಂಬ ಖಾಸಗಿ ಹಡಗು ಕಂಪನಿ ಈ ಸೇವೆಯನ್ನು ಒದಗಿಸಲಿದೆ. ಕಂಕಸತುರೈ ಬಂದರನ್ನು ಮೇಲ್ದರ್ಜೆಗೇರಿಸುವ ನಿಟ್ಟಿನಲ್ಲಿ ಭಾರತವು ಶ್ರೀಲಂಕಾಕ್ಕೆ 582 ಕೋಟಿ ರು.ಗಿಂತಲೂ ಹೆಚ್ಚು ಅನುದಾನ ನೀಡಿದೆ. ಆದ್ದರಿಂದಲೇ ಈ ಸೇವೆ ಪುನರಾರಂಭವಾಗಿದೆ. ಎಲ್‌ಟಿಟಿಇ ಮತ್ತು ಶ್ರೀಲಂಕಾ ನಡುವಿನ ಯುದ್ಧದ ನಂತರ ಈ ಸೇವೆಯನ್ನು ನಿಲ್ಲಿಸಿತ್ತು.

## ವಿಶ್ವ ಛಾಯಾಗ್ರಾಹಕರ ದಿನವನ್ನು ಎಂದು ಆಚರಿಸಲಾಗುತ್ತದೆ ?

a) ಆಗಸ್ಟ್ 19
b) ಆಗಸ್ಟ್ 20
c) ಆಗಸ್ಟ್ 21
d) ಆಗಸ್ಟ್ 22

**ಉತ್ತರ:–a)**

# ವಿಶ್ವ ಛಾಯಾಗ್ರಹಣ ದಿನ



ಪ್ರತಿವರ್ಷ ಆಗಸ್ಟ್ 19ರಂದು ವಿಶ್ವ ಛಾಯಾಗ್ರಹಣ ದಿನವನ್ನು ಆಚರಿಸಲಾಗುತ್ತದೆ. ಸಾವಿರ ಪದಗಳು ಹೇಳುವ ವಿವರಣೆಯನ್ನು ಒಂದು ಚಿತ್ರ ಹೇಳುತ್ತದೆ ಎಂಬ ಮಾತು ಛಾಯಾಗ್ರಹಣದ ಮಹತ್ವವನ್ನು ತಿಳಿಸುತ್ತದೆ. ಪದಗಳಲ್ಲಿ ವರ್ಣಿಸಲಾಗದ ಅದೆಷ್ಟೋ ಮಾತುಗಳನ್ನು ಕೇವಲ ಒಂದು ಚಿತ್ರದಿಂದ ತಿಳಿಯಬಹುದಾಗಿದೆ. ಛಾಯಾಗ್ರಹಣ ಕಲೆ, ವಿಜ್ಞಾನ ಮತ್ತು ಇತಿಹಾಸ ತಿಳಿಯುವುದು, ಹೆಚ್ಚು ಹೆಚ್ಚು ಛಾಯಾಗ್ರಾಹಕರು, ಪರಿಣತರನ್ನು ಬೆಳೆಸುವುದು, ಕಲೆ ಮತ್ತು ತಂತ್ರಜ್ಞಾನ, ಸೃಜನಶೀಲ ವ್ಯಕ್ತಿಯ ವಿಚಾರ ವಿನಿಮಯ ಮಾಡಿಕೊಳ್ಳುವುದು ವಿಶ್ವ ಛಾಯಾಗ್ರಹಣ ದಿನಾಚರಣೆಯ ಮುಖ್ಯ ಉದ್ದೇಶ.

ಪ್ರಸ್ತುತ ದಿನಗಳಲ್ಲಿ ಸ್ಮಾರ್ಟ್ ಫೋನ್‌ಗಳು ಪ್ರತಿಯೊಬ್ಬರಲ್ಲೂ ಇದ್ದು, ಬಹಳಷ್ಟು ಜನರ ಪ್ಯಾಷನ್ ಆಗಿ ಫೋಟೊಗ್ರಫಿ ಮಾರ್ಪಟ್ಟಿದೆ.




**ಆಚರಣೆಯ ಇತಿಹಾಸ:** ಫ್ರಾನ್ಸ್ ದೇಶದಲ್ಲಿ 1939ರ ಆಗಸ್ಟ್ 19ರಂದು ಮೊದಲ ಬಾರಿಗೆ ವಿಶ್ವ ಛಾಯಾಗ್ರಹಣ ದಿನವನ್ನು ಘೋಷಿಸಲಾಯಿತು. ಆದರೆ ಜಾಗತಿಕ ಮಟ್ಟದಲ್ಲಿ ಛಾಯಾಚಿತ್ರಕ್ಕೆ ಇರುವ ಮನ್ನಣೆಯನ್ನು ಗಮನಿಸಿ ವಿಶ್ವ ಮಟ್ಟದಲ್ಲಿ 2010ರ ಆಗಸ್ಟ್ 19ರಂದು ಭಾರತವು ಸೇರಿದಂತೆ 100 ದೇಶಗಳಲ್ಲಿ ಮೊದಲ ಛಾಯಾಗ್ರಹಣ ದಿನವನ್ನು ಆಚರಿಸಲಾಯಿತು.

**ಮತ್ತು** ಛಾಯಾಗ್ರಾಹಕರು ತಮ್ಮ ಚಿಂತನೆ ಹಂಚಿಕೊಳ್ಳುವುದನ್ನು ಪ್ರೋತ್ಸಾಹಿಸಲು ವಿಶ್ವ, ದೇಶ, ರಾಜ್ಯ ಮಟ್ಟದಲ್ಲಿ ಅತ್ಯುತ್ತಮ ಚಿತ್ರಗಳನ್ನು ಪ್ರದರ್ಶಿಸುವ ಮೂಲಕ ವಿಶ್ವ ಛಾಯಾಗ್ರಹಣ ದಿನವನ್ನು ವಿಶೇಷವಾಗಿ ಆಚರಿಸಲಾಗುತ್ತದೆ.

ಈ ದಿನ ವಿಶ್ವ ಫೋಟೊಗ್ರಫಿ ದಿನದ ಇತಿಹಾಸವನ್ನು ಸ್ಮರಿಸುವುದು, ಫೋಟೊಗ್ರಫಿ ಕಲೆ ಬಗ್ಗೆ ಜಾಗೃತಿ ಮೂಡಿಸಲಾಗುತ್ತದೆ. ಮುಂದಿನ ಪೀಳಿಗೆಗೆ ತಜ್ಞರ ಅನುಭವ, ತಾಂತ್ರಿಕ ಕೌಶಲಗಳ, ಪ್ರೇರಣೆ ನೀಡುವ ಮೂಲಕ ಈ ದಿನವನ್ನು ಸಾಕಾರಗೊಳಿಸುತ್ತಾರೆ.

**ಫೋಟೊಗ್ರಫಿ ಪದದ ಅರ್ಥ ಮತ್ತು ಇತಿಹಾಸ:** 'ಫೋಟೊಗ್ರಫಿ' ಎಂಬುದು ಗ್ರೀಕ್ ಭಾಷೆಯ ಪದ. 'ಫೋಸ್' ಎಂದರೆ ಬೆಳಕು, 'ಗ್ರಾಫಿಯನ್' ಎಂದರೆ ಬೆಳಕಿನಿಂದ ಬರೆದದ್ದು ಛಾಯಾಗ್ರಹಣ. ಈ ಪದವನ್ನು ಮೊದಲ ಬಾರಿಗೆ ಆವಿಷ್ಕರಿಸಿದವರು ಸರ್ ಜಾನ್ ಹರ್ಷೆಲ್. ಜಾರ್ಜ್ ಈಸ್ಟ್‌ಮನ್, ಹಿಪೊಲೈಟ್ ಬೇಯರ್ಡ್, ಹರ್ಬರ್ಟ್ ಬೋಯರ್ ಬತ್ತಿ, ಫ್ರೆಡ್ರಿಕ್ ಲಾಂಡ್ ಮತ್ತಿತರರ ಶ್ರಮವೇ ಇಂದಿನ ಆಧುನಿಕ ಕ್ಯಾಮೆರಾಗಳು. 'ಡಗೋರಿಯೋ' ಮಾದರಿಯ ಕ್ಯಾಮೆರಾ ಆವಿಷ್ಕಾರಗೊಂಡ ದಿನವನ್ನು ಛಾಯಾಗ್ರಹಣ ದಿನವನ್ನಾಗಿ ಆಚರಿಸಲಾಗುತ್ತಿದೆ. 1839ರಲ್ಲಿ ಲೂಯಿಸ್ ಡಗೋರಿಯೋ 'ಕ್ರೂಡ್ ಕ್ಯಾಮೆರಾ' ಕಂಡು ಹಿಡಿದರೆ, 1839ರಲ್ಲಿ ವಿಲಿಯಮ್ ಫಾಕ್ಸ್ ಟಾಲ್ಬಟ್ 'ಕ್ಯಾಲೋಟೈಪ್' ಕ್ಯಾಮೆರಾ ಸಂಶೋಧಿಸಿದರು. ಈ ಸಂಶೋಧನೆಗಳನ್ನು ಫ್ರೆಂಚ್ ಸರಕಾರ ಅನುಕ್ರಮವಾಗಿ 1839ರ ಆಗಸ್ಟ್ 19ರಲ್ಲಿ ಮತ್ತು 1841ರಲ್ಲಿ ಅಧಿಕೃತವಾಗಿ ಘೋಷಿಸಿತು. ಛಾಯಾಗ್ರಹಣ ಪರಿಕರಗಳ ಅನ್ವೇಷಣೆಯ ನೆನಪಿಗಾಗಿ ಪ್ರತಿವರ್ಷ ಆ.19ರಂದೇ ವಿಶ್ವ ಛಾಯಾಗ್ರಹಣ ದಿನ ಆಚರಿಸಿಕೊಂಡು ಬರಲಾಗುತ್ತಿದೆ.

**ಫೋಟೊಗ್ರಫಿ ಉದ್ಯಮ:** ಪ್ರಸ್ತುತ ಫೋಟೊಗ್ರಫಿ ದೊಡ್ಡ ಉದ್ಯಮವಾಗಿದೆ. ಲಕ್ಷಾಂತರ ಯುವ ಜನರು ಫೋಟೊಗ್ರಫಿಯಿಂದಲೇ ತಮ್ಮ ಬದುಕು ಕಟ್ಟಿಕೊಳ್ಳುತ್ತಿದ್ದಾರೆ. ಫೋಟೊಗ್ರಫಿ ಮದುವೆ, ಸಭೆ, ಸಮಾರಂಭಗಳಲ್ಲಿ ವಿಡಿಯೊಗಳನ್ನು ಸೆರೆ ಹಿಡಿದು ಅದನ್ನು ಸುಂದರವಾಗಿ ಕಟ್ಟಿಕೊಡುವ ಒಂದು ಕಲೆಯೂ ಆಗಿದೆ. ಇಂದು ವೆಡ್ಡಿಂಗ್ ಫೋಟೊಗ್ರಫಿ, ಸಿನಿಮಾ ಫೋಟೊಗ್ರಫಿ ಎಂಬ ಹೆಸರಲ್ಲಿ ಉದ್ಯಮವಾಗಿ ಬೆಳೆದಿದೆ.

ಫೋಟೊಗ್ರಫಿ ಒಂದು ಉದ್ಯಮ ಮಾತ್ರವಲ್ಲದೆ, ಅದೊಂದು ವೃತ್ತಿ, ಕಲೆ, ಹವ್ಯಾಸ, ಪ್ರತಿಭೆ, ಸೂಕ್ಷ್ಮ ಸಂವೇದನೆ ಎಲ್ಲವೂ ಆಗಿದೆ. ಛಾಯಾಗ್ರಹಣ ಅಥವಾ ಫೋಟೊಗ್ರಫಿ ಸಂದರ್ಭಗಳು, ನೆನಪುಗಳನ್ನು ಸಂಗ್ರಹಿಸುವ ಒಂದು ಕಲೆಯಾಗಿದೆ. ಈ ಹಿಂದೆ ಕ್ಯಾಮೆರಾ ಇದ್ದರಷ್ಟೆ ಫೋಟೊ ತೆಗೆಯಬಹುದಾಗಿತ್ತು. ಆದರೆ, ಸ್ಮಾರ್ಟ್‌ಫೋನ್ ಕ್ರಾಂತಿಯಿಂದಾಗಿ ಎಲ್ಲರೂ ತಮ್ಮ ತಮ್ಮ ಸ್ಮಾರ್ಟ್ ಫೋನ್‌ಗಳಲ್ಲಿ ಫೋಟೊಗಳನ್ನು ತೆಗೆಯುವುದರ ಮೂಲಕ ಫೋಟೊಗ್ರಾಫರ್‌ಗಳಾಗಿ ಮಾರ್ಪಟ್ಟಿದ್ದಾರೆ.

## ಕೆಳಗಿನ ಯಾರು ಆಗಸ್ಟ್ 20 ರಂದು ಜನಿಸಿಲ್ಲ?

a) ನಾರಾಯಣ ಮೂರ್ತಿ
b) ರಾಜೀವ್ ಗಾಂಧಿ
c) ದೇವರಾಜ್ ಅರಸ್
d) ಸಿದ್ದರಾಮಯ್ಯ

**ಉತ್ತರ:d)**

ಆಗಸ್ಟ್ 20
ವಿಕ ಈ ದಿನ ವಿಶೇಷ

ಜನುಮ ದಿನ

## ದೇವರಾಜ ಅರಸ್



- 1915ರ ಆಗಸ್ಟ್ 20ರಂದು ಮೈಸೂರಿನ ಹುಣಸೂರು ತಾಲೂಕಿನ ಕಲ್ಲಹಳ್ಳಿಯಲ್ಲಿ ಜನಿಸಿದ ದೇವರಾಜ ಅರಸ್ ಎರಡು ಬಾರಿ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದರು. ಇವರು ತಮ್ಮ ಅಧಿಕಾರವಧಿಯಲ್ಲಿ ಭೂ ಸುಧಾರಣೆ- ಉಳುವವನೇ ಹೊಲದೊಡೆಯ ಕಾನೂನುಗಳನ್ನು ಜಾರಿಗೆ ತಂದರು. ಹಿಂದುಳಿದ ವರ್ಗದ ಕಲ್ಯಾಣಕ್ಕಾಗಿ ಹಾವನೂರು ಆಯೋಗವನ್ನು ರಚಿಸಿದರು. ದೇವರಾಜು ಅರಸು ಅವರ ದೂರದೃಷ್ಟಿಯ ಆಡಳಿತದ ನಿರ್ಧಾರಗಳು ರಾಜ್ಯದಲ್ಲಿ ಕ್ರಾಂತಿಕಾರಿ ಬದಲಾವಣೆಗಳಿಗೆ ಕಾರಣವಾಗಿವೆ. ಇವರು 1982ರ ಜೂನ್ 6ರಂದು ನಿಧನರಾದರು.

## ರಾಜೀವ್ ಗಾಂಧಿ



- ಪ್ರಧಾನಿ ಇಂದಿರಾ ಗಾಂಧಿ ಹಾಗೂ ಫಿರೋಜ್ ಗಾಂಧಿ ದಂಪತಿಯ ಪುತ್ರ ರಾಜೀವ್ ಗಾಂಧಿ 1944ರ ಆಗಸ್ಟ್ 20ರಂದು ಮುಂಬಯಿಯಲ್ಲಿ ಜನಿಸಿದರು. ಸಹೋದರ ಸಂಜಯ್ ಗಾಂಧಿ ಮರಣದ ಬಳಿಕ ರಾಜೀವ್ ಗಾಂಧಿ ರಾಜಕೀಯಕ್ಕೆ ಬಂದರು. ಉತ್ತರ ಪ್ರದೇಶದ ಆಮೇಥಿಯಲ್ಲಿ ಗೆದ್ದು ಸಂಸದರಾದರು. ಇಂದಿರಾ ಗಾಂಧಿ ಮರಣಾನಂತರ 1984ರ ಅಕ್ಟೋಬರ್ 31ರಿಂದ 1989ರ ಡಿಸೆಂಬರ್ 2ರವರೆಗೆ ಭಾರತದ ಪ್ರಧಾನಿಯಾಗಿದ್ದರು. 1991ರ ಮೇ 21ರಂದು ತಮಿಳುನಾಡಿನ ಶ್ರೀಪೆರಂಬದೂರಿನಲ್ಲಿ ಬಹಿರಂಗ ಚುನಾವಣಾ ಭಾಷಣ ಮಾಡುತ್ತಿದ್ದಾಗ ಶ್ರೀಲಂಕಾದ ಎಲ್‌ಟಿಟಿಇಯ ಮಾನವ ಬಾಂಬ್ ದಾಳಿಗೆ ಬಲಿಯಾದರು.

## ಎನ್.ಆರ್. ನಾರಾಯಣ ಮೂರ್ತಿ



- ಮೈಸೂರಿನಲ್ಲಿ ಜನಿಸಿದ ಎನ್.ಆರ್. ನಾರಾಯಣ ಮೂರ್ತಿ ಮಾಹಿತಿ ತಂತ್ರಜ್ಞಾನ ಸಂಸ್ಥೆ 'ಇನ್ಫೋಸಿಸ್'ನ ಸಂಸ್ಥಾಪಕರು. ಅವರು ಇನ್ಫೋಸಿಸ್ ಕಂಪನಿಯನ್ನು 1981ರ ಜುಲೈ 2ರಂದು ನಂದನ್ ನಿಲೇಕಣಿ, ಎಸ್. ಗೋಪಾಲ ಕೃಷ್ಣನ್, ಎಸ್.ಡಿ. ಶಿಬುಲಾಲ್, ಕೆ. ದಿನೇಶ್, ಅಶೋಕ್ ಅರೋರಾ ಹಾಗೂ ಎನ್.ಎಸ್. ರಾಘವನ್ ಜತೆ ಸೇರಿ ಕೇವಲ 10 ಸಾವಿರ ರೂಪಾಯಿ ಬಂಡವಾಳದೊಂದಿಗೆ ಸ್ಥಾಪಿಸಿದರು. ಈಗ ಸಂಸ್ಥೆಯು 838 ಶತಕೋಟಿ ರೂಪಾಯಿ ಬೆಲೆಬಾಳುತ್ತಿದೆ. 3.15 ಲಕ್ಷ ಉದ್ಯೋಗಿಗಳನ್ನು ಹೊಂದಿದೆ. 56 ದೇಶಗಳಲ್ಲಿ ತನ್ನ ಸೇವೆಯನ್ನು ನೀಡುತ್ತಿದೆ. 2000ನೇ ವರ್ಷ ನಾರಾಯಣ ಮೂರ್ತಿ ಅವರಿಗೆ ಪದ್ಮಶ್ರೀ ಗೌರವ ಸಂದಿದೆ.

ಆಗಸ್ಟ್ - 19:

# ವಿಶ್ವ ಮಾನವೀಯ ದಿನ




ವಿಶ್ವದಾದ್ಯಂತದ ಮಾನವೀಯ ನೆರವು ಕಾರ್ಯಕರ್ತರನ್ನು ಗೌರವಿಸುವ ಉದ್ದೇಶದಿಂದ ಪ್ರತೀ ವರ್ಷ ಆಗಸ್ಟ್ 19ರಂದು ವಿಶ್ವ ಮಾನವೀಯ ದಿನವನ್ನು ಆಚರಿಸಲಾಗುತ್ತಿದೆ. ಇದು ವಿಶ್ವಸಂಸ್ಥೆಯ ಪ್ರಧಾನ ಕಚೇರಿಯ ಮೇಲೆ ನಡೆದ ಬಾಂಬ್ ದಾಳಿಯನ್ನು ನೆನಪಿಸುತ್ತದೆ. ಮಾನವೀಯ ನೆರವು ಕಾರ್ಯಕರ್ತರು ಪ್ರಪಂಚದಾದ್ಯಂತ ಬಳಲುತ್ತಿರುವ ಜನರಿಗೆ ಜೀವ ಉಳಿಸುವ ಸಹಾಯವನ್ನು ಒದಗಿಸುತ್ತಾರೆ. ಸಂಘರ್ಷದ ವಲಯಗಳಲ್ಲಿ ಅಥವಾ ನೈಸರ್ಗಿಕ ವಿಪತ್ತುಗಳಿಂದ ಹಾನಿಗೊಳಗಾದ ಪ್ರದೇಶಗಳಲ್ಲಿ ವಾಸಿಸುವ ಕಾರ್ಮಿಕರು ವಿಶೇಷವಾಗಿ ದುರ್ಬಲರಾಗಿದ್ದಾರೆ. ಈ ದಿನವು ತಮ್ಮ ಕೆಲಸದ ಸಮಯದಲ್ಲಿ ತಮ್ಮ ಪ್ರಾಣವನ್ನು ತ್ಯಾಗ ಮಾಡಿದ ಮತ್ತು ನೋವು ಅನುಭವಿಸಿದ ಸಾವಿರಾರು ಮಾನವೀಯ ಕಾರ್ಯಕರ್ತರಿಗೆ ಗೌರವ ಸಲ್ಲಿಸುತ್ತದೆ.

ಅಗತ್ಯವಿರುವ ಜನರಿಗೆ ಬೆಂಬಲ ಮತ್ತು ರಕ್ಷಣೆಯನ್ನು ಒದಗಿಸಲು ತಮ್ಮ ಸೇವೆಯನ್ನು ಮುಂದುವರಿಸುವ ಎಲ್ಲಾ ಕಾರ್ಮಿಕರನ್ನು ಗೌರವಿಸುವ ದಿನ ಇದು. ವಿಶ್ವ ಮಾನವೀಯ ದಿನವು ಮಾನವೀಯ ಕಾರಣಗಳಿಗಾಗಿ ಕೆಲಸ ಮಾಡುವ, ಅದಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಡುವ ಮಾನವೀಯ ಕಾರ್ಯಕರ್ತರ ಶ್ರಮ ಸಣ್ಣದೇನೂ ಅಲ್ಲ. 2003ರಲ್ಲಿ ವಿಶ್ವಸಂಸ್ಥೆಯ ಬಾಗ್ದಾದ್ ಪ್ರಧಾನ ಕಚೇರಿಯ ಮೇಲೆ ನಡೆದ ಬಾಂಬ್ ದಾಳಿಯಲ್ಲಿ ಸೆರ್ಗಿಯೊ ವಿಯೆರಾ ಡಿ ಮೆಲ್ಲೊ ಸೇರಿದಂತೆ 22 ಯುಎನ್ ಸಹಾಯ ಕಾರ್ಯಕರ್ತರು ಸಾವನ್ನಪ್ಪಿದ ನೆನಪಿಗಾಗಿ ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಈ ದಿನವನ್ನು ಸ್ಥಾಪಿಸಿತು.

ಇತ್ತೀಚಿಗೆ ಕರಾವಳಿ ಪಡೆಯ ಮಹಾನಿರ್ದೇಶಕರು ಹೃದಯಾಘಾತದಿಂದ ನಿಧನರಾದರು. ಅವರ ಹೆಸರೇನು ?

a) ಸಕ್ಸೇನ ನಾಯರ್

b) ರಾಜೇಶ್ ಕುಮಾರ್

c) ರಾಕೇಶ್ ಪಾಲ್

d) ಸಂಜಯ್ ಶುಕ್ಲಾ

ಸರಿಯಾದ ಉತ್ತರ: c)

# ಕರಾವಳಿ ಪಡೆ ಮಹಾ ನಿರ್ದೇಶಕ ರಾಕೇಶ್ ಪಾಲ್ ನಿಧನ



ಚೆನ್ನೈ: ಭಾರತೀಯ ಕರಾವಳಿ ಪಡೆಯ ಮಹಾ ನಿರ್ದೇಶಕ ರಾಕೇಶ್ ಪಾಲ್ ಅವರು ಚೆನ್ನೈನ ಸರಕಾರಿ ಆಸ್ಪತ್ರೆಯಲ್ಲಿ ಭಾನುವಾರ ಹೃದಯಾಘಾತದಿಂದ ನಿಧನರಾಗಿದ್ದಾರೆ. ಕರಾವಳಿ ಪಡೆಯು ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅವರು ಚೆನ್ನೈಗೆ ಬಂದಿದ್ದರು. ಬೆಳಗ್ಗೆ ಆರೋಗ್ಯದಲ್ಲಿ ಏರುಪೇರು ಕಾಣಿಸಿಕೊಂಡದ್ದರಿಂದ ಆಸ್ಪತ್ರೆಗೆ ದಾಖಲಿಸಲಾಗಿತ್ತು. ಆದರೆ ಚಿಕಿತ್ಸೆ ಫಲಕಾರಿಯಾಗದೆ ಮೃತಪಟ್ಟಿದ್ದಾರೆ. ರಾಕೇಶ್ ಪಾಲ್ ಅವರು ಕರಾವಳಿ ಪಡೆಯ 25ನೇ ಮಹಾನಿರ್ದೇಶಕರಾಗಿ ಕಳೆದ ವರ್ಷ ಜುಲೈ 19ರಂದು ಅಧಿಕಾರ ವಹಿಸಿಕೊಂಡಿದ್ದರು.

**ಇತ್ತೀಚೆಗೆ ಸುದ್ದಿಯಲಿದ್ದ ಪಾರ್ವೊ ವೈರಸ್ – 19ಬಿ ವೈರಸ್ ಅನ್ನು ಮೊದಲ ಬಾರಿಗೆ ಯಾವಾಗ ಪತ್ತೆ ಮಾಡಲಾಯಿತು ?**

ಎ) 1983

ಬಿ) 1975

ಸಿ) 1999

ಡಿ) 2004

ಉತ್ತರ: B)

# ಪಾರ್ವೊ ವೈರಸ್ -19 ಬಿ

ಅಮೆರಿಕದ ಸೆಂಟರ್ಸ್ ಫಾರ್ ಡಿಸೀಸ್ ಕಂಟ್ರೋಲ್ ಆಂಡ್ ಪ್ರಿವೆನ್ಷನ್ (ಸಿಡಿಸಿ) ಹೆಚ್ಚುತ್ತಿರುವ ಪಾರ್ವೊ ವೈರಸ್ ಬಿ-19 ಪ್ರಕರಣಗಳ ಕುರಿತು ಎಚ್ಚರಿಕೆ ನೀಡಿದೆ. ಇದು ಸಾಂಕ್ರಾಮಿಕ ಸೋಂಕಾಗಿದ್ದು, ಮಕ್ಕಳ ಮೇಲೆ ಗಾಢ ಪರಿಣಾಮ ಬೀರಲಿದೆ. 2024ರಲ್ಲಿ 14 ಯೂರೋಪಿಯನ್ ರಾಷ್ಟ್ರಗಳಲ್ಲಿ ಈ ಸೋಂಕು ಪತ್ತೆಯಾಗಿದೆ.

**ಏನಿದು ಪಾರ್ವೊವೈರಸ್ 19-ಬಿ?:** ಪಾರ್ವೊವೈರಸ್ ಬಿ-19 ಎಂಬುದು ಒಂದು ವೈರಸ್‌ನ ಹೆಸರು. ಈ ವೈರಸ್ ಸೋಂಕಿತ ವ್ಯಕ್ತಿಯು ಕೆಮ್ಮಿದಾಗ ಅಥವಾ ಸೀನಿದಾಗ ಗಾಳಿಯ ಮೂಲಕ ಈ ಇತರರಿಗೆ ಹರಡುತ್ತದೆ. ಇದು ವರ್ಷದಲ್ಲಿ ಹಲವು ಬಾರಿ ನಿರ್ದಿಷ್ಟ ಅವಧಿಗಳಲ್ಲಿ ಕಾಣಿಸಿಕೊಳ್ಳಲಿದೆ.

**ಲಕ್ಷಣಗಳು:** ಸ್ನಾಯು ನೋವು, ಜ್ವರ, ತಲೆನೋವು, ಸುಸ್ತು ಮುಂತಾದ ಲಕ್ಷಣಗಳು ಕಾಣಿಸಿಕೊಳ್ಳಲಿವೆ. ಆರಂಭದಲ್ಲಿ ಜ್ವರ ಕಾಣಿಸಿಕೊಳ್ಳುತ್ತದೆ. ಕೆಲವು ದಿನಗಳ ಬಳಿಕ ಮುಖದ ಮೇಲೆ ಕೆಂಪು ದದ್ದು, ಕೀಲುನೋವು, ಊತ ಕಾಣಿಸಿಕೊಳ್ಳುತ್ತದೆ.

**ಚಿಕಿತ್ಸೆ:** ಪಾರ್ವೊವೈರಸ್ ಗುಣಪಡಿಸಲು ಯಾವುದೇ ನಿರ್ದಿಷ್ಟ ಔಷಧವಿಲ್ಲ. ಜ್ವರ ಮತ್ತು ನೋವುಗಳನ್ನು ಹೋಗಲಾಡಿಸಲು ಚಿಕಿತ್ಸೆ ನೀಡಬಹುದಷ್ಟೇ. ಹೆಚ್ಚಿನ ಜನರು ಗಂಭೀರ ಸಮಸ್ಯೆಗಳಿಲ್ಲದೆ ಚೇತರಿಸಿಕೊಳ್ಳುತ್ತಾರೆ. ಆದರೆ, ರಕ್ತಹೀನತೆ, ಈಗಾಗಲೇ ಇತರ ಕಾಯಿಲೆಗಳಿಂದ ಬಳಲುತ್ತಿರುವವರಿಗೆ ಸಮಸ್ಯೆಯಾಗಬಹುದು. ಅದರಲ್ಲಿಯೂ ಗರ್ಭಿಣಿಯರು ಬಹಳ ಎಚ್ಚರಿಕೆಯಿಂದ ಇರಬೇಕು.



## ಪಾರ್ವೊವೈರಸ್ 19-ಬಿ ಬಗ್ಗೆ

1975ರಲ್ಲಿ ಮೊದಲ ಬಾರಿಗೆ ಈ ವೈರಸ್ ಅನ್ನು ಪತ್ತೆ ಹಚ್ಚಲಾಯಿತು. ಇದು ಮಕ್ಕಳಿಂದ ಮಕ್ಕಳಿಗೆ ಅತಿ ವೇಗವಾಗಿ ಹರಡುವ ರೋಗ. ಇದು ಮೂಳೆ ಮತ್ತು ಜೀವಕೋಶಗಳ ಮೇಲೆ ಗಾಢ ಪರಿಣಾಮ ಬೀರುತ್ತದೆ. ಇದು ಉಸಿರಾಟಕ್ಕೆ ತೊಂದರೆ ಉಂಟು ಮಾಡಬಹುದು. ಇದು ರಕ್ತದ ಮೂಲಕವೂ ಹರಡುವ ಸಾಧ್ಯತೆಯಿದೆ. ಕೆಲವೊಮ್ಮೆ ರೋಗ ಲಕ್ಷಣಗಳೇ ಕಾಣಿಸುವುದಿಲ್ಲ. ಆದರೂ, ವೈರಸ್ ತಗುಲಿರುತ್ತದೆ.

ಪ್ರಭಾಕರ್ ಕೋರೆ ಇತ್ತೀಚೆಗೆ ಸುದ್ದಿಯಲ್ಲಿದ್ದರು ಇವರು ಯಾವ ಕ್ಷೇತ್ರದ ಸಾಧಕರಾಗಿದ್ದಾರೆ?

a) ಶಿಕ್ಷಣ
b) ಮಕ್ಕಳ ಕಥೆ
c) ಬಾಹ್ಯಾಕಾಶ ತಂತ್ರಜ್ಞಾನ
d) ಜೀವವಿಜ್ಞಾನ

ಉತ್ತರ: a)

1) ಪ್ರಭಾಕರ ಕೋರೆ ಇತ್ತೀಚೆಗೆ ಸುದ್ದಿಯಲ್ಲಿದ್ದರು. ಇವರು ಯಾವ ಕ್ಷೇತ್ರದ ಸಾಧಕರು?

ಎ) ಶಿಕ್ಷಣ — ಬಿ) ಮಕ್ಕಳ ಕಥೆ

ಸಿ) ಬಾಹ್ಯಾಕಾಶ ತಂತ್ರಜ್ಞಾನ — ಡಿ) ಜೀವ ವಿಜ್ಞಾನ

ಉತ್ತರ: ಎ) ಶಿಕ್ಷಣ

- **ವಿವರಣೆ:** ಡಾ.ಫ.ಗು.ಹಳಕಟ್ಟಿ ಫೌಂಡೇಷನ್ ನೀಡುವ 'ವಚನ ಪಿತಾಮಹ ಫ.ಗು.ಹಳಕಟ್ಟಿ ರಾಷ್ಟ್ರೀಯ ಪ್ರಶಸ್ತಿ'ಗೆ ಸಾಹಿತ್ಯ ಕ್ಷೇತ್ರದಿಂದ ಸಾಣೇಹಳ್ಳಿಯ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ಶಿಕ್ಷಣ ಕ್ಷೇತ್ರದಿಂದ ಪ್ರಭಾಕರ ಕೋರೆ ಮತ್ತು ಸಮಾಜ ಸೇವೆ ಕ್ಷೇತ್ರದಿಂದ ತೇಜಸ್ವಿನಿ ಅನಂತಕುಮಾರ್ ಆಯ್ಕೆಯಾದರು.
- ವಚನ ಪಿತಾಮಹ ಫ.ಗು.ಹಳಕಟ್ಟಿ ಅವರ ಸ್ಮರಣಾರ್ಥ ಈ ಪ್ರಶಸ್ತಿ ಸ್ಥಾಪಿಸಲಾಗಿದೆ. ಸಾಹಿತ್ಯ, ಶೈಕ್ಷಣಿಕ ಮತ್ತು ಸಮಾಜಸೇವೆ ಕ್ಷೇತ್ರದಲ್ಲಿ ಸಾಧನೆ ಮಾಡಿದವರಿಗೆ ಈ ಪ್ರಶಸ್ತಿ ನೀಡಲಾಗುತ್ತಿದೆ.

## ಸುಬ್ರೊ ಟೂ ಕಪ್ ಯಾವ ಕ್ರೀಡೆಗೆ ಸಂಬಂಧಿಸಿದೆ?

a) ಚೆಸ್

b) ಸ್ನೋಕರ್

c) ವಾಲಿಬಾಲ್

d) ಫುಟ್ಬಾಲ್

ಉತ್ತರ: D)

• ಎಲ್.ಪಿ.ಕುಲಕರ್ಣಿ, ಬಾದಾಮಿ

• ಸುಬ್ರೊಟೊ(ತೊ) ಕಪ್,ಯಾವ ಕ್ರೀಡೆಗೆ ಸಂಬಂಧಿಸಿದೆ?



• ಎ. ಚೆಸ್.
• ಬಿ. ಸ್ನೂಕರ್.
• ಸಿ. ವ್ಯಾಲಿಬಾಲ್.
• ಡಿ. ಫುಟ್ಬಾಲ್.

ಉತ್ತರ: ಡಿ. ಫುಟ್ಬಾಲ್.

## ಮಾಹಿತಿ

ಸುಬ್ರೊಟೊ(ತೊ) ಕಪ್ ಅಂತಾರಾಷ್ಟ್ರೀಯ ಫುಟ್ಬಾಲ್ ಪಂದ್ಯಾವಳಿಯ 61 ನೇ ಆವೃತ್ತಿಯು ಎರಡು ವರ್ಷಗಳ ನಂತರ ಪ್ರಾರಂಭವಾಯಿತು. ದೇಶದಾದ್ಯಂತ ಶಾಲೆಗಳಿಗೆ ಇದು ಅತ್ಯಂತ ಪ್ರತಿಷ್ಠಿತ ಫುಟ್ಬಾಲ್ ಪಂದ್ಯಾವಳಿ ಎಂದು ಪರಿಗಣಿಸಲಾಗಿದೆ. ಈ ಪಂದ್ಯಾವಳಿಯನ್ನು ಭಾರತೀಯ ವಾಯುಪಡೆಯೊಂದಿಗೆ ಸುಬ್ರೊಟೊ(ತೊ) ಮುಖರ್ಜಿ ಸ್ಪೋರ್ಟ್ಸ್ ಎಜುಕೇಶನ್ ಸೊಸೈಟಿ ಆಯೋಜಿಸಿದೆ. ಬಾಂಗ್ಲಾದೇಶದ ಏರ್ ಫೋರ್ಸ್ ಸ್ಕೂಲ್ ಜೊತೆಗೆ ಭಾರತದ 25 ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳನ್ನು ಪ್ರತಿನಿಧಿಸುವ ಒಟ್ಟು 92 ಶಾಲೆಗಳು ಪಂದ್ಯಾವಳಿಯಲ್ಲಿ ಸ್ಪರ್ಧಿಸುತ್ತಿವೆ.

ಈ ಕೆಳಗಿನ ಯಾರು ಸತತ ಎರಡನೇ ವರ್ಷ ಕೇಂದ್ರೀಯ ಬ್ಯಾಂಕರ್ ಪಟ್ಟಿಯಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ?

a) ಶಕ್ತಿಕಾಂತ ದಾಸ್

b) ರಘುರಾಮ್ ರಾಜನ್

c) ಸುಧಾಮೂರ್ತಿ

d) ನಿರ್ಮಲಾ ಸೀತಾರಾಮನ್

ಉತ್ತರ:–a)

# ಕೇಂದ್ರೀಯ ಬ್ಯಾಂಕರ್ ಪಟ್ಟಿ: ಸತತ 2ನೇ ವರ್ಷ ಶಕ್ತಿಕಾಂತ್ ದಾಸ್ ನಂ.1

ನವದೆಹಲಿ: ಭಾರತೀಯ ರಿಸರ್ವ್ ಬ್ಯಾಂಕ್ (ಆರ್‌ಬಿಐ) ಗವರ್ನರ್ ಶಕ್ತಿಕಾಂತ್ ದಾಸ್ ಸತತ 2ನೇ ವರ್ಷವೂ ವಿಶ್ವದ ಅಗ್ರ ಕೇಂದ್ರೀಯ ಬ್ಯಾಂಕರ್‌ಆಗಿ ಹೊರ ಹೊಮ್ಮಿದ್ದಾರೆ ಎಂದು ಅಮೆರಿಕ ಮೂಲದ ಗ್ಲೋಬಲ್ ಫಿನಾನ್ಸ್ ನಿಯತಕಾಲಿಕ ವರದಿ ಮಾಡಿದೆ. ಹಣದುಬ್ಬರ ನಿಯಂತ್ರಣ,ಆರ್ಥಿಕ ಅಭಿವೃದ್ಧಿ ಗುರಿ ಸಾಧನೆ, ಬಡ್ಡಿ ದರ ನಿರ್ವಹಣೆಯಲ್ಲಿ ಮಾಡಿದ ಸಾಧನೆಗಾಗಿ ದಾಸ್ ಸೇರಿ ಮೂವರು ಮೊದಲ ಸ್ಥಾನ ಪಡೆದಿದ್ದಾರೆ.



**ಇತ್ತೀಚಿಗೆ ವಿಶ್ವದ ಅತ್ಯಂತ ಹಿರಿಯ ವ್ಯಕ್ತಿ ಮರಿಯಾ ಅವರ ನಿಧನ ವಾಯಿತು ಮೂಲತಹ ಯಾವ ದೇಶದವರು?**

a) ಅಮೆರಿಕ
b) ದಕ್ಷಿಣ ಆಫ್ರಿಕಾ
c) ಭಾರತ
d) ನೇಪಾಳ

**ಉತ್ತರ:a)**

# ವಿಶ್ವದ ಅತ್ಯಂತ ಹಿರಿಯ ವ್ಯಕ್ತಿ ನಿಧನ

**ಮ್ಯಾಡ್ರಿಡ್:** ಜಗತ್ತಿನ ಅತ್ಯಂತ ಹಿರಿಯ ವ್ಯಕ್ತಿ ಎನ್ನಲಾಗಿದ್ದ, ಅಮೆರಿಕ ಮೂಲದ, ಸ್ಪೇನ್ ನಿವಾಸಿ ಮಹಿಳೆ ಮರಿಯಾ ಬ್ರನ್ಯಾಸ್ (117) ಮಂಗಳವಾರ ನಿಧನರಾದರು ಎಂದು ಅವರ ಕುಟುಂಬ ಮೂಲಗಳು ತಿಳಿಸಿವೆ. 'ಮರಿಯಾ ಬ್ರನ್ಯಾಸ್ ನಮ್ಮನ್ನು ಬಿಟ್ಟು ಅಗಲಿದ್ದಾರೆ, ಅವರು ತಮ್ಮಿಚ್ಛೆಯಂತೆಯೇ ನಿದ್ರೆಯಲ್ಲಿ, ಶಾಂತರಾಗಿ, ಯಾವುದೇ ನೋವಿಲ್ಲದೆ ನಿರ್ಗಮಿಸಿದ್ದಾರೆ' ಎಂದು ಕುಟುಂಬಸ್ಥರು ಎಕ್ಸ್‌ನಲ್ಲಿ ಪೋಸ್ಟ್ ಮಾಡಿದ್ದಾರೆ. ಮರಿಯಾ 1907ರ ಮಾ. 4ರಂದು ಸ್ಯಾನ್ ಫ್ರಾನ್ಸಿಸ್ಕೊದಲ್ಲಿ ಜನಿಸಿದ್ದರು. ಮರಿಯಾ ತಮ್ಮ 113ನೇ ವಯಸ್ಸಿನಲ್ಲಿ ಕೋವಿಡ್-19 ಸೋಂಕಿಗೆ ಒಳಗಾಗಿದ್ದರೂ ಬದುಕುಳಿದಿದ್ದರು. ಒಲೊಟ್‌ನ ಕೆಟಲನ್ ಟೌನ್‌ನ ನರ್ಸಿಂಗ್ ಹೋಮ್‌ನಲ್ಲಿ ಅವರು ಸಾವಿಗೀಡಾದರು.



» 117 ವರ್ಷದ ಮರಿಯಾ ಇನ್ನಿಲ್ಲ

'ಯಾವಾಗ ಅಂತ ನನಗೆ ಗೊತ್ತಿಲ್ಲ, ಆದರೆ ಈ ಸುದೀರ್ಘ ಪ್ರಯಾಣ ಶೀಘ್ರದಲ್ಲೇ ಕೊನೆಯಾಗಲಿದೆ. ತುಂಬಾ ಬದುಕಿದ್ದರಿಂದ ಸಾವು ನನ್ನನ್ನು ಕಂಡುಕೊಳ್ಳಲಿದೆ, ಆದರೆ ಸಾವನ್ನು ನಾನು ನಗುತ್ತಲೇ, ಮುಕ್ತವಾಗಿ, ಸಂತೃಪ್ತಿಯಿಂದ ಭೇಟಿಯಾಗಲು ಬಯಸುತ್ತೇನೆ' ಎಂದು ಎಂದು ನಿಧನಕ್ಕೂ ಒಂದು ದಿನ ಮೊದಲು ಮರಿಯಾ ಹೇಳಿದ್ದರು ಎಂಬುದಾಗಿ ಕುಟುಂಬಸ್ಥರು ಮಾಹಿತಿ ಹಂಚಿಕೊಂಡಿದ್ದಾರೆ. ನೂರ ಹತ್ತು ಅಥವಾ ಅದಕ್ಕೂ ಹೆಚ್ಚಿನ ವಯಸ್ಸಿನವರ ವಿವರ ಮೌಲ್ಯೀಕರಿಸುವ ಜೆರೊಂಟೊಲಜಿ ರಿಸರ್ಚ್ ಗ್ರೂಪ್‌ನ ಪಟ್ಟಿಯಲ್ಲಿ ಮರಿಯಾ ಅತ್ಯಂತ ಹಿರಿಯ ವ್ಯಕ್ತಿಯಾಗಿದ್ದರು. ಇವರಿಗಿಂತಲೂ ಹಿರಿಯರಾಗಿದ್ದ ಫ್ರೆಂಚ್ ನನ್ ಲುಸೈಲ್ ರಾಂಡನ್ ಕಳೆದ ವರ್ಷ ನಿಧನರಾದರು. ಹೀಗಾಗಿ, ಜಪಾನ್‌ನ 116 ವರ್ಷದ ಟೊಮಿಕೊ ಇಟೂಕ ಈಗ ಈ ಪಟ್ಟಿಯಲ್ಲಿನ ಅತ್ಯಂತ ಹಿರಿಯ ವ್ಯಕ್ತಿ ಆಗಿದ್ದಾರೆ.

ಭಾರತ ಸರ್ಕಾರದ ಮಾರ್ಗಸೂಚಿ ಪ್ರಕಾರ ಯಾವ ಸೋಂಕಿನ ಸಂಪರ್ಕಕ್ಕೆ ಬಂದ ವ್ಯಕ್ತಿಗಳು 21 ದಿನಗಳವರೆಗೆ ಇತರ ಸಂಪರ್ಕಕ್ಕೆ ಬಾರದಂತೆ ಪ್ರತ್ಯೇಕವಾಗಿರಬೇಕು

a) ಮಂಕಿ ಪಾಕ್ಸ್
b) ಎಚ್‌ಐವಿ
c) ಹೆಪಟೈಟಿಸ್ ಬಿ
d) ಆನೆಕಾಲು ರೋಗ

ಸರಿಯಾದ ಉತ್ತರ: a)

# ಮಂಕಿಪಾಕ್ಸ್




ಪ್ರಾಣಿಜನ್ಯ ಕಾಯಿಲೆಗಳಲ್ಲಿ ಒಂದಾದ ಮಂಕಿಪಾಕ್ಸ್ ವಿಶ್ವದಾದ್ಯಂತ ಹಲವು ದೇಶಗಳಲ್ಲಿ ಕಾಣಿಸಿಕೊಂಡಿದ್ದು, ವಿಶ್ವ ಆರೋಗ್ಯ ಸಂಸ್ಥೆ (ಡಬ್ಲ್ಯುಎಚ್‌ಒ) ಜುಲೈ 23ರಂದು ಜಾಗತಿಕ ಸಾರ್ವಜನಿಕ ಆರೋಗ್ಯ ತುರ್ತು ಪರಿಸ್ಥಿತಿ (ಪಿಎಚ್‌ಇಐಸಿ) ಘೋಷಿಸಿದೆ. ಭಾರತದಲ್ಲೂ ಮಂಕಿಪಾಕ್ಸ್ ಪ್ರಕರಣಗಳು ಪತ್ತೆಯಾಗಿರುವ ಹಿನ್ನೆಲೆಯಲ್ಲಿ ಕೇಂದ್ರ ಸರಕಾರ ಮಂಕಿಪಾಕ್ಸ್ ಕಾಯಿಲೆ ನಿರ್ವಹಣೆಗೆ ಮಾರ್ಗಸೂಚಿ ಬಿಡುಗಡೆ ಮಾಡಿದೆ. ವಿಮಾನ ನಿಲ್ದಾಣ, ಬಂದರುಗಳಲ್ಲಿ ಅಂತಾರಾಷ್ಟ್ರೀಯ ಪ್ರಯಾಣಿಕರ ಮೇಲೆ ಕಟ್ಟೆಚ್ಚರ ವಹಿಸುವಂತೆ ಕ್ರಮಕೈಗೊಂಡಿದೆ. ಸೋಂಕಿತರ ಚಿಕಿತ್ಸೆಗಾಗಿ ದಿಲ್ಲಿಯ ರಾಮ್ ಮನೋಹರ್ ಲೋಹಿಯಾ ಆಸ್ಪತ್ರೆ, ಸಫ್ದರ್‌ಜಂಗ್ ಆಸ್ಪತ್ರೆ ಮತ್ತು ಲೇಡಿ ಹಾರ್ಡಿಂಜ್ ಮೂರು ಆಸ್ಪತ್ರೆಗಳನ್ನು ಆಯ್ಕೆ ಮಾಡಲಾಗಿದೆ. ಸದ್ಯ ದೇಶದ 32 ಪ್ರಯೋಗಾಲಯಗಳು ಎಂಪಾಕ್ಸ್ ಪರೀಕ್ಷೆಗೆ ಸಜ್ಜುಗೊಂಡಿವೆ. ಮಂಕಿಪಾಕ್ಸ್ ಪ್ರಕರಣಗಳನ್ನು ನಿಭಾಯಿಸಲು ಆಸ್ಪತ್ರೆಗಳನ್ನು ಸಿದ್ಧವಾಗಿಟ್ಟುಕೊಳ್ಳುವಂತೆ ಕೇಂದ್ರ ಎಲ್ಲ ರಾಜ್ಯಗಳಿಗೆ ಸೂಚಿಸಿದೆ.

**ಏನಿದು ಮಂಕಿಪಾಕ್ಸ್?**

ಸ್ಮಾಲ್‌ಪಾಕ್ಸ್ (ಸಿಡುಬು) ಮತ್ತು ಚಿಕನ್ ಪಾಕ್ಸ್‌ಗಳ ಸ್ವರೂಪದ ಮಂಕಿಪಾಕ್ಸ್ ಕಾಯಿಲೆಯಲ್ಲೂ ಸಿಡುಬಿನ ಹೋಲಿಕೆ ಇರುತ್ತದೆಯಾದರೂ, ತೀವ್ರತೆ ಅಷ್ಟಿರುವುದಿಲ್ಲ, ಮರಣದ ಅಪಾಯ ಕೂಡ ಕಡಿಮೆ. ಇದು 24 ವಾರಗಳವರೆಗೆ ಮನುಷ್ಯನನ್ನು ಕಾಡುತ್ತದೆ. ಕಾಯಿಲೆ ಪೀಡಿತರಲ್ಲಿ ಸಾವಿನ ಪ್ರಮಾಣ ಶೇ.3ರಿಂದ ಶೇ.6ರಷ್ಟಿದೆ ಎಂದು ವಿಶ್ವ ಆರೋಗ್ಯ ಸಂಸ್ಥೆ ಮಾಹಿತಿ ನೀಡಿದೆ.



**ಎಲ್ಲಿ ಎಷ್ಟು ಪ್ರಕರಣ?:** 2022ರ ಡಬ್ಲ್ಯುಎಚ್‌ಒ ವರದಿ ಪ್ರಕಾರ 116 ದೇಶಗಳಲ್ಲಿ ಒಟ್ಟು 99,176 ಎಂಪಾಕ್ಸ್ ಪ್ರಕರಣಗಳು ಪತ್ತೆಯಾಗಿದ್ದರೆ, 208 ಸಾವು ಸಂಭವಿಸಿದ್ದವು. ಆದರೆ ಈ ವರ್ಷ ಈ ಪ್ರಮಾಣ ಹೆಚ್ಚಿದ್ದು, ವಿಶ್ವಾದ್ಯಂತ ಪತ್ತೆಯಾದ ಮಂಕಿಪಾಕ್ಸ್ ಪ್ರಕರಣಗಳ ಸಂಖ್ಯೆ 15,600, ಸಾವಿನ ಸಂಖ್ಯೆ 537. ಭಾರತದಲ್ಲಿ 2022ರಿಂದ 30 ಮಂಕಿಪಾಕ್ಸ್ ಪ್ರಕರಣಗಳು ಪತ್ತೆಯಾಗಿದ್ದು, ಭಾರತದಲ್ಲಿ ಕಳೆದ ಮಾರ್ಚ್‌ನಲ್ಲೂ ಮಂಕಿಪಾಕ್ಸ್ ಪ್ರಕರಣ ಪತ್ತೆಯಾಗಿದೆ.

**ಲಕ್ಷಣಗಳು:** ಮಂಕಿಪಾಕ್ಸ್ ಪೀಡಿತರಲ್ಲೂ ಸಿಡುಬು ಪೀಡಿತರಲ್ಲಿ ಕಂಡುಬರುವಂತೆ ಚರ್ಮದ ಮೇಲೆ ದದ್ದುಗಳು, ಊತ ಕಾಣಿಸಿಕೊಳ್ಳುತ್ತವೆ. ಚರ್ಮದ ಮೇಲಿನ ಗುಳ್ಳೆಗಳು ಊದಿಕೊಂಡು, ಕೀವು ತುಂಬಿಕೊಳ್ಳುವುದರಿಂದ ನೋವು ಉಲ್ಬಣಗೊಳ್ಳುತ್ತದೆ. ಜ್ವರ, ಚಳಿ, ತಲೆನೋವು, ಸ್ನಾಯು ಸೆಳೆತ, ಬಳಲಿಕೆ ಇದರ ಸಾಮಾನ್ಯ ಲಕ್ಷಣಗಳು. ಚರ್ಮದ ಮೇಲಿನ ಗಾಯದ ಸಂಪರ್ಕ ಅಥವಾ ಸೋಂಕುಪೀಡಿತ ವ್ಯಕ್ತಿ ಬಳಸಿದ ವಸ್ತುಗಳ ಸಂಪರ್ಕದಿಂದ ಈ ಕಾಯಿಲೆ ಹರಡುವ ಸಾಧ್ಯತೆ ಹೆಚ್ಚಿದೆ. ಇದುವರೆಗಿನ ಪ್ರಕರಣಗಳ ಪ್ರಸರಣಕ್ಕೆ ಅತ್ಯಂತ ನಿಕಟ ಸಂಪರ್ಕವೇ ಕಾರಣ ಎಂದು ತಿಳಿದುಬಂದಿದೆ. ಸಾಮಾನ್ಯವಾಗಿ, ಸೋಂಕಿನ ಸಂಪರ್ಕಕ್ಕೆ ಬಂದು 521 ದಿನಗಳಲ್ಲಿ ಕಾಯಿಲೆಯ ಲಕ್ಷಣಗಳು ಗೋಚರಿಸಲು ಆರಂಭಿಸುತ್ತವೆ. ಚರ್ಮದ ಮೇಲೆ ಕೆಂಪು ಗುಳ್ಳೆಗಳು ಏಳುವುದು, ಬಾಯಲ್ಲಿ ಹುಣ್ಣು, ಕಣ್ಣುಗಳ ಸುತ್ತ ಊತ ಕಾಣಿಸಿಕೊಳ್ಳುವುದು ಮುಖ್ಯ ಲಕ್ಷಣಗಳು.

**ಮಂಕಿಪಾಕ್ಸ್ ಹಿನ್ನೆಲೆ:** 1958ರಲ್ಲಿ ಡೆನ್ಮಾರ್ಕ್‌ನ ಕೋಪನ್ ಹೇಗನ್‌ನಲ್ಲಿ ಮಂಕಿಪಾಕ್ಸ್ ಕಾಣಿಸಿಕೊಂಡಿತ್ತು. ನಂತರ 1986ರಲ್ಲಿ ಆಫ್ರಿಕಾದ ಕೇಂದ್ರ ಮತ್ತು ಪಶ್ಚಿಮ ಭಾಗಗಳ ಕಾಣಿಸಿಕೊಂಡ ಬಗ್ಗೆ ವರದಿಯಾಗಿದೆ. ಮಾಂಕಿಪಾಕ್ಸ್ ಅಸ್ತಿತ್ವ ಸಾವಿರಾರು ವರ್ಷಗಳಿಂದ ಇದೆಯಾದರೂ, ಇದೀಗ ಇತರ ಭಾಗಗಳಿಗೂ ಕ್ಷಿಪ್ರವಾಗಿ ವ್ಯಾಪಿಸುತ್ತಿರುವುದು ಆತಂಕಕ್ಕೆ ಎಡೆ ಮಾಡಿಕೊಟ್ಟಿದೆ.

## ನಿಯಂತ್ರಣ ಹೇಗೆ?

ಭಾರತ ಸರಕಾರದ ಮಾರ್ಗಸೂಚಿ ಪ್ರಕಾರ, ಸೋಂಕಿನ ಸಂಪರ್ಕಕ್ಕೆ ಬಂದ ವ್ಯಕ್ತಿಗಳು 21 ದಿನಗಳವರೆಗೆ ಇತರರ ಸಂಪರ್ಕಕ್ಕೆ ಬಾರದಂತೆ ಪ್ರತ್ಯೇಕವಾಗಿರಬೇಕು. ಮಾಸ್ಕ್ ಧರಿಸಬೇಕು ಮತ್ತು ಕೈಗಳನ್ನು ಆಗಾಗ ಸ್ವಚ್ಛಗೊಳಿಸುತ್ತಿರಬೇಕು. ಚರ್ಮದ ಮೇಲಿನ ಗುಳ್ಳೆಗಳು ಒಣಗುವವರೆಗೆ ಅವುಗಳ ಮೇಲೆ ಯಾವಾಗಲೂ ಹೊದಿಕೆ ಹಾಕಿರಬೇಕು. ಸಿಡುಬು ನಿರ್ಮೂಲನೆಗೆ ಬಳಸುತ್ತಿದ್ದ ಲಸಿಕೆಗಳೇ ಮಂಕಿಪಾಕ್ಸ್ ಕಾಯಿಲೆಗೂ ಪರಿಣಾಮಕಾರಿ ಔಷಧಿ ಎನ್ನಲಾಗಿದೆ. ಆದರೆ, ಈ ಲಸಿಕೆಗಳು ಅಗತ್ಯ ಪ್ರಮಾಣದಲ್ಲಿ ಪೂರೈಕೆಯಾಗುತ್ತಿಲ್ಲ. ಸಿಡುಬು ತಡೆಗಟ್ಟುವ 3.1 ಕೋಟಿ ಲಸಿಕೆಗಳ ದಾಸ್ತಾನಿದೆ ಎಂದು ವಿಶ್ವಸಂಸ್ಥೆ ಹೇಳುತ್ತದೆ. ಆದರೆ, ಈ ಲಸಿಕೆಗಳನ್ನು ಆರ್ಥಿಕವಾಗಿ ಬಲಾಢ್ಯವಾಗಿರುವ ಪಾಶ್ಚಿಮಾತ್ಯ ದೇಶಗಳು ಖರೀದಿಸುತ್ತವೆಯೇ ಹೊರತು, ಅಲ್ಲಿಗಿಂತ ಮೂರು ಪಟ್ಟು ಹೆಚ್ಚು ಪ್ರಕರಣಗಳಿರುವ ಆಫ್ರಿಕಾದಲ್ಲಿ ಲಸಿಕೆಗಳ ಕೊರತೆ ಎದುರಾಗಿದ್ದು, ಹರಡುವಿಕೆಯೂ ಇತರೆಡೆಗಿಂತ ಹೆಚ್ಚಿದೆ.

"ಅನ್ಸರ್ ಇನ್ ದಿ ಕಾಲ್ ಟು ಕೊಯಿಲಿ" ಇದು ಯಾವ ಮಾಜಿ ಕ್ರಿಕೆಟಿಗನ ಕುರಿತಾದ ಜೀವನ ಚರಿತ್ರೆಯಾಗಿದೆ?

a) ವೆಸ್ಲಿ ಹಾಲ್
b) ಯಾಗ್ ಹೋಮ್ಸ್
c) ಎಚ್‌ಎಫ್ ಜೋರ್ಡನ್
d) ಚಾರ್ಲಿ ಗ್ರಿಟ್

ಉತ್ತರ: a)

4) 'ಆನ್ಸರಿಂಗ್ ದಿ ಕಾಲ್ ಟು ಕೊಹ್ಲಿ' ಇದು ಯಾವ ಮಾಜಿ ಕ್ರಿಕೆಟರ್ ಕುರಿತಾದ ಜೀವನ ಚರಿತ್ರೆ?

ಎ) ಲ್ಯಾರಿ ಗೋಮ್ಸ್ ಬಿ) ಜೆಫ್ ಡುಜಾನ್

ಸಿ) ಚಾರ್ಲಿ ಗ್ರಿಫಿತ್ ಡಿ) ವೆಸ್ಲಿ ಹಾಲ್

ಉತ್ತರ: ಡಿ) ವೆಸ್ಲಿ ಹಾಲ್

- **ವಿವರಣೆ:** ವೆಸ್ಟ್‌ಇಂಡೀಸಿನ ಮಾಜಿ ವೇಗದ ಬೌಲರ್ ವೆಸ್ಲಿ ಹಾಲ್. ಜೂನ್‌ನಲ್ಲಿ ವಿಂಡೀಸ್‌ನಲ್ಲಿ ಟ್ವೆಂಟಿ:20 ವಿಶ್ವಕಪ್ ನಡೆಯುತ್ತಿರುವ ವೇಳೆ ವೆಸ್ಲಿ ಹಾಲ್ ಭಾರತದ ಅಗ್ರಮಾನ್ಯ ಬ್ಯಾಟ್ಸಮನ್ ವಿರಾಟ್ ಕೊಹ್ಲಿ ಅವರಿಗೆ ತಮ್ಮ ಜೀವನ ಚರಿತ್ರೆ ಕೃತಿ 'ಆನ್ಸರಿಂಗ್ ದಿ ಕಾಲ್ ಟು ಕೊಹ್ಲಿ' ಕೃತಿಯನ್ನು ಉಡುಗೊರೆಯಾಗಿ ನೀಡಿದರು. ವೆಸ್ಲಿ ಹಾಲ್ ವೆಸ್ಟ್‌ಇಂಡೀಸ್ ಪರ 48 ಟೆಸ್ಟ್‌ಗಳನ್ನಾಡಿ 192 ವಿಕೆಟ್ ಪಡೆದವರು.

ಭಾರತೀಯ ಪ್ಯಾರಾ ಒಲಿಂಪಿಕ್ ಸಮಿತಿಯ ಉಪಾಧ್ಯಕ್ಷರಾದ ಇವರು ಒಲಂಪಿಕ್ಸ್ ನ ಭಾರತೀಯ ತಂಡದ ಡಿ ಮಿಷನ್ ಆಗಿ ನೇಮಕಗೊಂಡಿದ್ದಾರೆ?

a) ಸತ್ಯಪ್ರಕಾಶ್
b) ನಾರಾಯಣ ಮೂರ್ತಿ
c) ಪ್ರಭುಲಿಂಗ
d) ಸವಿತಾ ದೇವಿ

ಉತ್ತರ: a)

# ಪ್ಯಾರಾಲಿಂಪಿಕ್ಸ್ ಸತ್ಯಪ್ರಕಾಶ್ ಚೀಫ್ ಡಿ ಮಿಷನ್

**ನವದೆಹಲಿ:** ಭಾರತೀಯ ಪ್ಯಾರಾಲಿಂಪಿಕ್ಸ್ ಸಮಿತಿ (ಪಿಸಿಐ) ಉಪಾಧ್ಯಕ್ಷ ಸತ್ಯ ಪ್ರಕಾಶ್ ಸಾಂಗ್ವಾನ್ ಪ್ಯಾರಿಸ್ ಪ್ಯಾರಾಲಿಂಪಿಕ್ಸ್ ಭಾರತ ತಂಡದ ಚೀಫ್ ಡಿ ಮಿಷನ್ ಆಗಿ



ನೇಮಕಗೊಂಡಿದ್ದಾರೆ. ಆಗಸ್ಟ್ 28 ರಂದು ಆರಂಭವಾಗಲಿರುವ ಕೂಟದ 12 ವಿಭಾಗಗಳಲ್ಲಿ 84 ಪ್ಯಾರಾ ಅಥ್ಲೀಟ್‌ಗಳ ಭಾರತ ತಂಡ ಪದಕ ಬೇಟೆಗೆ ಇಳಿಯಲಿದೆ.

ಚೀಫ್ ಡಿ ಮಿಷನ್ ಆಗಿ ಜವಾಬ್ದಾರಿವಹಿಸಿರುವುದು ದೊಡ್ಡ ಗೌರವ ಎನಿಸಿದೆ. ನಮ್ಮ ಕ್ರೀಡಾಪಟುಗಳ ಯಶಸ್ಸಿನ ಜತೆಗೆ ಪ್ಯಾರಾಲಿಂಪಿಕ್ಸ್‌ನಲ್ಲಿ ಭಾರತ ಹೆಮ್ಮೆಪಡುವಂತೆ ಕಾರ್ಯ ನಿರ್ವಹಿಸಲು ಬದ್ಧನಾಗಿದ್ದೇನೆ ಎಂದು ಸಾಂಗ್ವಾನ್ ತಿಳಿಸಿದ್ದಾರೆ. ಪ್ಯಾರಾಲಿಂಪಿಕ್ ಸಮಿತಿಯ ಅವಿಭಾಜ್ಯ ಅಂಗವಾಗಿರುವ ಸತ್ಯ ಪ್ರಕಾಶ್ ಅವರ ಸಮರ್ಪಣೆ ಮತ್ತು ನಾಯಕತ್ವ ಗುಣ ಕ್ರೀಡಾಪಟುಗಳಿಗೆ ಯಾವಾಗಲೂ ಸ್ಫೂರ್ತಿ ತುಂಬಲಿದೆ. ಸತ್ಯಪ್ರಕಾಶ್ ಮಾರ್ಗ ದರ್ಶನದಲ್ಲಿ ಭಾರತದ ಕ್ರೀಡಾಪಟುಗಳು ಉತ್ತಮ ಸಾಧನೆ ಮಾಡಲಿದ್ದಾರೆ ಎಂಬ ವಿಶ್ವಾಸವಿದೆ ಎಂದು ಪಿಸಿಐ ಅಧ್ಯಕ್ಷ ದೇವೇಂದ್ರ ಝಜಾರಿಯಾ ಭರವಸೆ ವ್ಯಕ್ತಪಡಿಸಿದಾರೆ.

## ಕೃಷಿ ಉತ್ಪನ್ನಗಳ ರಫ್ತಿನಲ್ಲಿ ಭಾರತಕ್ಕೆ ಎಷ್ಟನೇ ಸ್ಥಾನ ದೊರೆತಿದೆ?

a) 7
b) 8
c) 9
d) 10

**ಉತ್ತರ: a)**



# ಕೃಷಿ ಉತ್ಪನ್ನಗಳ ರಫ್ತು ಭಾರತಕ್ಕೆ 8ನೇ ಸ್ಥಾನ

ಕೃಷಿ ಪ್ರಧಾನ ದೇಶವಾದ ಭಾರತದಲ್ಲಿ ಕೃಷಿ ಉತ್ಪನಗಳ ರಫ್ತು ಪ್ರಮುಖವಾಗಿದೆ. ಕೆಲ ಭೌಗೋಳಿಕ ರಾಜಕೀಯ ವಿದ್ಯಮಾನಗಳು ರಫ್ತು ಪ್ರಮಾಣದ ಮೇಲೆ ಪರಿಣಾಮ ಬೀರಿದ್ದವು. ಆದರೆ, ವಿಶ್ವ ವ್ಯಾಪಾರ ಸಂಸ್ಥೆ (ವರ್ಲ್ಡ್ ಟ್ರೇಡ್ ಆರ್ಗನೈಸೇಷನ್) ಈ ಕುರಿತು ವರದಿ ನೀಡಿದ್ದು, ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರತ ಕೃಷಿ ಉತ್ಪನ್ನಗಳ ರಫ್ತಿನಲ್ಲಿ 8ನೇ ಸ್ಥಾನ ಪಡೆದುಕೊಂಡಿದೆ. ಇತ್ತೀಚೆಗಷ್ಟೇ ವಿಶ್ವ ವ್ಯಾಪಾರ ಸಂಸ್ಥೆ 2023ನೇ ಸಾಲಿನ ಜಾಗತಿಕ ಕೃಷಿ ಉತ್ಪನ್ನಗಳ ರಫ್ತು ಕುರಿತು ವ್ಯಾಪಾರ ಅಂಕಿ-ಅಂಶಗಳ ವರದಿ ಬಹಿರಂಗಗೊಳಿಸಿದೆ. ಈ ಪೈಕಿ ಭಾರತ 55 ಬಿಲಿಯನ್ ಡಾಲರ್ ಮೊತ್ತದ ಕೃಷಿ ಉತ್ಪನ್ನಗಳನ್ನು ರಫ್ತು ಮಾಡುವ ಮೂಲಕ ಜಾಗತಿಕವಾಗಿ 8ನೇ ಸ್ಥಾನಕ್ಕೆ ಏರಿದೆ. 2022ರಲ್ಲಿ ಕೆಲ ಕಾರಣದಿಂದಾಗಿ ಭಾರತದ ರಫ್ತು ಪ್ರಮಾಣ 51 ಬಿಲಿಯನ್ ಡಾಲರ್ ಇಳಿದಿತ್ತು. ಕೆಂಪು ಸಮುದ್ರದಲ್ಲಿ ಕಡಲ್ಗಳ್ಳರು, ಹೌತಿ ಬಂಡುಕೋರರ ದಾಳಿ, ರಷ್ಯಾ - ಯುಕ್ರೇನ್ ಯುದ್ಧ ಭಾರತೀಯ ಕೃಷಿ ರಫ್ತಿನ ಮೇಲೆ ಪರಿಣಾಮ ಬೀರಿದ್ದವು. ಜತೆಗೆ ಮೇ 2022ರಲ್ಲಿ ಗೋಧಿ, ಜು.2023ರಲ್ಲಿ ಬಾಸ್ಮತಿ ಹೊರತಾದ ಅಕ್ಕಿ ಮತ್ತು ಅ.2023ರಲ್ಲಿ ಸಕ್ಕರೆ ರಫ್ತು ನಿಷೇಧವಾಗಿದ್ದು ಕೂಡ ಕೃಷಿ ಉತ್ಪನ್ನಗಳ ರಫ್ತಿನ ಪ್ರಮಾಣದಲ್ಲಿ ಇಳಿಕೆಯಾಗುವಂತೆ ಮಾಡಿತ್ತು.




**ಜಾಗತಿಕ ಮಟ್ಟದಲ್ಲಿ ಕಾಣದ ಪ್ರಗತಿ**

## ಚೇತರಿಕೆ ಕಾಣದ ವಹಿವಾಟು

ಕೃಷಿ ಉತ್ಪನ್ನಗಳನ್ನು ಅಧಿಕವಾಗಿ ರಫ್ತು ಮಾಡುವ ಪ್ರಮುಖ 10 ದೇಶಗಳ ಪೈಕಿ ಬ್ರೆಜಿಲ್ (ಶೇ.6), ಯೂರೋಪಿಯನ್ ಒಕ್ಕೂಟ (ಶೇ.5) ಮತ್ತು ಥಾಯ್ಲೆಂಡ್ (ಶೇ.0.2) ಮಾತ್ರ ಕೊಂಚ ಅಭಿವೃದ್ಧಿ ಕಂಡಿದ್ದವು. ಉಳಿದ ಏಳೂ ದೇಶಗಳು ಯಾವುದೇ ಚೇತರಿಕೆ ಕಂಡಿರಲಿಲ್ಲ. ಇಷ್ಟೆಲ್ಲ ಅಡೆತಡೆಗಳ ನಡುವೆಯೂ ಅಮೆರಿಕ 198 ಬಿಲಿಯನ್ ಡಾಲರ್ಸ್ ಮೊತ್ತದ ಕೃಷಿ ಉತ್ಪನ್ನಗಳನ್ನು ರಫ್ತು ಮಾಡಿ ಜಾಗತಿಕ ಮಟ್ಟದಲ್ಲಿ 2ನೇ ಸ್ಥಾನ ಪಡೆದಿದೆ. 95 ಬಿಲಿಯನ್ ಡಾಲರ್‌ಗಿಂತ ಕೊಂಚ ಇಳಿಮುಖ ಕಂಡಿದ್ದರೂ ಚೀನಾ 4ನೇ ಸ್ಥಾನದಲ್ಲಿದೆ. ಕೆನಡಾ, ಮೆಕ್ಸಿಕೋ, ಇಂಡೋನೇಷ್ಯಾ ಮತ್ತು ಆಸ್ಟ್ರೇಲಿಯಾ ಟಾಪ್ ಹತ್ತರ ಸ್ಥಾನದಲ್ಲಿವೆ. ಪ್ರಮುಖ ಹತ್ತು ದೇಶಗಳು ಸೇರಿ ಒಟ್ಟು ಶೇ.71.9ರಷ್ಟು ಕೃಷಿ ಉತ್ಪನ್ನಗಳ ರಫ್ತು ಮಾಡುತ್ತವೆ. ಈ ಮೂಲಕ ಜಾಗತಿಕವಾಗಿ ಭಾರತವೂ ಕೃಷಿ ರಫ್ತಿನಲ್ಲಿ ಸಿಂಹಪಾಲು ಹೊಂದಿದೆ.

### ಟಾಪ್ 10 ದೇಶಗಳು

• ಯುರೋಪಿಯನ್ ಒಕ್ಕೂಟ • ಅಮೆರಿಕ • ಬ್ರೆಜಿಲ್ • ಚೀನಾ • ಕೆನಡಾ • ಮೆಕ್ಸಿಕೋ • ಇಂಡೋನೇಷ್ಯಾ • ಭಾರತ • ಆಸ್ಟ್ರೇಲಿಯಾ • ಥಾಯ್ಲೆಂಡ್

## ಅಂತಾರಾಷ್ಟ್ರೀಯ ವಹಿವಾಟು

ಅಂತಾರಾಷ್ಟ್ರೀಯ ವ್ಯವಹಾರದ ಕುರಿತ ಮಾಹಿತಿ ಪಡೆಯಲು ವಿಶ್ವ ವ್ಯಾಪಾರ ಸಂಸ್ಥೆ (ವರ್ಲ್ಡ್ ಟ್ರೇಡ್ ಆರ್ಗನೈಸೇಶನ್) 2023ರಲ್ಲಿ ಹೊಸತೊಂದು ಅವಕಾಶ ಕಲ್ಪಿಸಿದ್ದು, ಇಲ್ಲಿ ಜಾಗತಿಕ ವ್ಯಾಪಾರ ವಹಿವಾಟುಗಳ ಕುರಿತ ಎಲ್ಲ ಅಂಶಗಳನ್ನು ಕರಾರುವಕ್ಕಾಗಿ ತಿಳಿದುಕೊಳ್ಳಬಹುದು.

**ಈ ಕೆಳಕಂಡವುಗಳಲ್ಲಿ ಯಾವುದು ಕುಬ್ಜ ಗ್ರಹವಾಗಿದೆ?**

a) ಮಂಗಳ
b) ಗುರು
c) ಪ್ಲುಟೊ
d) ಶುಕ್ರ

ಉತ್ತರ:– C

ಇತಿಹಾಸದಲ್ಲಿ (ಆಗಸ್ಟ್ 24) ಇಂದು...

# ಗ್ರಹ ಸ್ಥಾನವನ್ನು ಕಳೆದುಕೊಂಡು ಕುಬ್ಜ ಗ್ರಹವಾದ ಪ್ಲುಟೊ



ಆ.24 2006 ರಲ್ಲಿ ಪ್ಲುಟೋವನ್ನು ಗ್ರಹದ ಸ್ಥಾನಮಾನದಿಂದ ಕೆಳಗಿಳಿಸಿ, ಕುಬ್ಜ ಗ್ರಹವೆಂದು ಶಿಫಾರಸ್ಸು ಮಾಡಿದ ವಿಜ್ಞಾನಿಗಳ ತಂಡ

## ಪ್ಲುಟೋ

ಸೂರ್ಯನಿಂದ 3.4 ಬಿಲಿಯನ್ ಮೈಲಿಗಳಷ್ಟು ದೂರದಲ್ಲಿರುವ ಈ ಕುಬ್ಜ ಗ್ರಹವು ಸೂರ್ಯನ ಸುತ್ತ ಒಂದು ಸುತ್ತು ಸುತ್ತಲು 248 ವರ್ಷ ತೆಗೆದುಕೊಳ್ಳುತ್ತದೆ. ಹೈಡ್ರೋಕಾರ್ಬನ್, ನೈಟ್ರೋಜೆನ್ ಹಾಗು ಮೀತೇನ್ ಅನಿಲಗಳಿಂದ ತುಂಬಿರುವ ಈ ಗ್ರಹದ ಉಷ್ಣಾಂಶವು -226 ಡಿಗ್ರಿ ಸೆಲಿಯಸ್ ನಿಂದ -240 ಸೆಲ್ಸಿಯಸ್ ವರೆಗೂ ಇದೆ.

ಈ ಕುಬ್ಜ ಗ್ರಹವು ಐದು ಚಂದ್ರರನ್ನು ಹೊಂದಿದ್ದು ಇದನ್ನು ಮೊದಲು ನಮ್ಮ ಸೌರ ಮಂಡಲದ ಒಂಬತ್ತನೆಯ ಗ್ರಹವೆಂದು ಪರಿಗಣಿಸಲಾಗಿತ್ತು ಆದರೆ ಕೆಲವು ಅಂಶಗಳನ್ನು ಈ ಗ್ರಹ ಹೊಂದಿಲ್ಲವೆಂದು ಇದನ್ನು ಕುಬ್ಜ ಗ್ರಹ (Dwarf planet) ಎಂದು ಪರಿಗಣಿಸಲಾಯಿತು.




ಬಳ್ಳಾರಿ ಬೆಳಗಾಯಿತು ವಿಶೇಷ

ಪ್ಲುಟೊ ಕುಬ್ಜ ಗ್ರಹದ ಸ್ಥಿತಿಗೆ ಇಳಿದು ಇಂದಿಗೆ (ಆಗಸ್ಟ್ 24) 18 ವರ್ಷಗಳು ಕಳೆದಿವೆ.ಸೌರಮಂಡಲದ ಗ್ರಹಗಳು ಯಾವವು? ಎಂದು ಕೇಳಿದರೆ, ನಾವು ವಿದ್ಯಾರ್ಥಿಗಳಾಗಿದ್ದಾಗ ಬುಧ, ಗುರು, ಶುಕ್ರ, ಭೂಮಿ, ಮಂಗಳ, ಗುರು, ಶನಿ, ಯುರೇನಸ್, ನೆಪ್ಚೂನ್, ಪ್ಲುಟೋ ಎಂದು 9 ಗ್ರಹಗಳ ಹೆಸರುಗಳನ್ನು ಒಂದೇ ಉಸಿರಿನಲ್ಲಿ ಹೇಳುತ್ತಿದ್ದೆವು.

ಉತ್ತರ ನೀಡಿದ ನಮಗೆ ಶಿಕ್ಷಕರಿಂದ ಶಹಬ್ಬಾಸ್‌ಗಿರಿ. ಆದರೆ 2006 ಆಗಸ್ಟ್ 24 ರಂದು ಈ ನವಗ್ರಹಗಳ ಪಟ್ಟಿಯಿಂದ ಪ್ಲುಟೋವನ್ನು ಕೈಬಿಟ್ಟು. ಅದನ್ನು ಕುಬ್ಜ ಗ್ರಹದ ಪಟ್ಟಿಗೆ ಸೇರಿಸಲಾಯಿತು.

2006 ರಲ್ಲಿ ಅಂತರರಾಷ್ಟ್ರೀಯ ಖಗೋಳ ಒಕ್ಕೂಟ ( ಐಎಯು ) ಪ್ಲುಟೊವನ್ನು ಗ್ರಹಗಳ ಸ್ಥಾನದಿಂದ ಕೆಳಗಿಳಿಸಿ ಅದನ್ನು ಕುಬ್ಜ ಗ್ರಹ ಎಂದು ವರ್ಗೀಕರಿಸಿತು. ''ಗ್ರಹ'' ಪದವನ್ನು ಹೊಸದಾಗಿ ವ್ಯಾಖ್ಯಾನಿಸಿದ ಐಎಯು, ಪ್ಲುಟೊ ಒಂದು ಗ್ರಹವಾಗಿಲ್ಲ ಅದನ್ನು ಎರಿಸ್ ಮತ್ತು ಸೆರೆಸ್ ಗಳೊಂದಿಗೆ ಸೇರಿಸಿ ಕುಬ್ಜಗ್ರಹವೆಂದು ವಿಂಗಡಿಸಿತು.

ಒಂದು ಕಾಲದಲ್ಲಿ ಸೌರವ್ಯೂಹ ಅತ್ಯಂತ ಹೊರಗಿನ ಗ್ರಹವೆಂದು ಪರಿಗಣಿಸಲ್ಪಟ್ಟ ಪ್ಲುಟೊ ಗ್ರಹದ ಸ್ಥಾನಮಾನವನ್ನು ಕಳೆದುಕೊಂಡು 134340 ಸಂಖ್ಯೆಯಿಂದ ಗುರುತಿಸ ಲ್ಪಡುತ್ತಿದೆ. ಪ್ಲುಟೋವನ್ನು ಸೌರಮಂಡಲದ ಗ್ರಹಗಳ ಪಟ್ಟಿಯಿಂದ ಹೊರಗಟ್ಟಿದ ಪರಿಣಾಮ ಈಗ ಕೇವಲ 8 ಗ್ರಹಗಳು ಮಾತ್ರ ಉಳಿದುಕೊಂಡಿವೆ.

### ಯಾಕೆ ಕೈ ಬಿಟ್ಟರು?

ಪ್ಲುಟೊ ಸಂಪೂರ್ಣ ಗ್ರಹವೂ ಅಲ್ಲದೆ ನಕ್ಷತ್ರವೂ ಅಲ್ಲದೆ ಇರುವುದರಿಂದ ಇದನ್ನು ಕುಬ್ಜ ಗ್ರಹವೆಂದು ಪರಿಗಣಿಸಲಾಗಿದೆ ಎಂದು ಐಎಯು ಹೇಳುತ್ತದೆ. ಪ್ಲುಟೋದ ಗಾತ್ರ, ಗುರುತ್ವ ಬಲ ಹಾಗೂ ಇತರ ಅಂಶಗಳನ್ನು ಪರಿಗಣಿಸಿ ಅದನ್ನು ಗ್ರಹ ವ್ಯವಸ್ಥೆಯಿಂದ ಹೊರಗೆ ಇಡಲಾಗಿದೆ.

ಅಂತರರಾಷ್ಟ್ರೀಯ ಖಗೋಳ ಒಕ್ಕೂಟದ ಹೊಸ ವ್ಯಾಖ್ಯಾನದ ಪ್ರಕಾರ ಆಕಾಶ ಕಾಯವೊಂದನ್ನು ಗ್ರಹವೆಂದು ಪರಿಗಣಿಸಲು ಮೂರು ಮಾನದಂಡಗಳಿವೆ. ಅವುಗಳೆಂದರೇ,

### ಒಂದು ಗ್ರಹವು ಆಕಾಶಕಾಯವಾಗಿದ್ದು

(ಎ) ಸೂರ್ಯನ ಸುತ್ತ ಕಕ್ಷೆಯಲ್ಲಿ ಪರಿಭ್ರಮಿಸಬೇಕು

(ಬಿ) ಕಕ್ಷಾ ವಲಯದ ಆಸುಪಾಸಿನ ಆಕಾಶಕಾಯಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ಸ್ವಯಂ-ಗುರುತ್ವಾಕರ್ಷಣೆಗೆ ಸಾಕಷ್ಟು ದ್ರವ್ಯರಾಶಿಯನ್ನು ಹೊಂದಿರುತ್ತದೆ. ಇದರಿಂದಾಗಿ ಅದು ಹೈಡ್ರೋಸ್ಟಾಟಿಕ್ ಸಮತೋಲನವನ್ನು ನಿರ್ವಹಿಸಬೇಕು.

(ಸಿ) ತನ್ನ ಕಕ್ಷೆಯ ಸುತ್ತಲಿನ ನೆರೆಹೊರೆಯಲ್ಲಿ ಇತರೇ ಯಾವುದೇ ಪ್ರಬಲ ಆಕಾಶಕಾಯಗಳಿರಬಾರದು.

ಐಜಯು ಪ್ರಕಾರ, ಪ್ಲುಟೊ ಮೊದಲೆರೆಡು ಮಾನದಂಡಗಳನ್ನು ಹೊಂದಿದೆ. ಆದರೇ ಮೂರನೇ ಮಾನದಂಡದ ವಿಷಯದಲ್ಲಿ ಪ್ಲುಟೊ ವಿಫಲವಾಗುವುದರಿಂದ ಅದು ಗ್ರಹವಲ್ಲ ಎಂಬ ನಿರ್ಣಯಕ್ಕೆ ಐಎಯು ಬಂದಿದೆ. ಮೂರನೇ ಮಾನದಂಡದ ಪ್ರಕಾರ ಯಾವುದೇ ಆಕಾಶಕಾಯವು ಗ್ರಹವಾಗಬೇಕಾದರೇ, ಅದು ತನ್ನ ಕಕ್ಷೆಯಲ್ಲಿ ಪ್ರಬಲವಾದ ಗುರುತ್ವಾಕರ್ಷಣೆಯ ವಸ್ತುವಾಗಿರಬೇಕು.

ಅದು ಇತರ ಆಕಾಶಕಾಯ ಗಳನ್ನು ದೂರವಿಡಬೇಕು ಅಥವಾ ತನ್ನೊಳಗೆ ವಿಲೀನಗೊಳ್ಳಿಸಿಕೊಂಡು ಕಕ್ಷೆಯೊಳಗೆ ಯಾವುದೇ ಇತರ ಪ್ರಬಲ ಆಕಾಶಕಾಯಕ್ಕೆ ಅವಕಾಶವಿರಬಾರದು. ಉದಾಹರಣೆಗೆ ಪ್ಲುಟೊ ತನ್ನ ಕಕ್ಷೆಯಲ್ಲಿರುವ ವಸ್ತುಗಳ ದ್ರವ್ಯರಾಶಿಯ 0.07 ಪಟ್ಟು ಮಾತ್ರ. ವಿತನ್ನಧ್ಯೆ, ಭೂಮಿಯು ತನ್ನ ಕಕ್ಷೆಯಲ್ಲಿರುವ ವಸ್ತುಗಳ ದ್ರವ್ಯರಾಶಿಯ 1.7 ದಶಲಕ್ಷ ಪಟ್ಟು ಹೆಚ್ಚಾಗಿದೆ.

ಎಲ್ಲ ಗ್ರಹಗಳು ಸೂರ್ಯನ ಸುತ್ತ ಸಮತಲದಲ್ಲಿ ಚಲಿಸಿದರೆ, ಪ್ಲುಟೋ ಮಾತ್ರ 17 ಡಿಗ್ರಿ ಕೋನದಲ್ಲಿ ಓರೆಯಾದ ಸಮತಲದಲ್ಲಿ ಚಲಿಸುತ್ತದೆ. ಇದೆಲ್ಲವನ್ನು ಪರಿಗಣಿಸಿ ಪ್ಲುಟೋವನ್ನು ಕುಬ್ಜ ಗ್ರಹವೆಂದು ಪರಿಗಣಿಸಲಾಗಿದೆ.

### ಪ್ಲುಟೋವನ್ನು ಗ್ರಹ ಎಂದು ಪರಿಗಣಿಸಿ ಎಂಬ ವಾದ

ಈ ಮರುವಿಂಗಡಣೆಯ ನಂತರ ಪ್ಲುಟೊವನ್ನು ಕುಬ್ಜ ಗ್ರಹಗಳ ಪಟ್ಟಿಗೆ ಸೇರಿಸಿ, ಪ್ಲುಟೊ ಸೌರಮಂಡಲದ ಎರಡನೆ ಅತಿ ದೊಡ್ಡ ಕ್ಷುದ್ರಗ್ರಹ (ಎರಿಸ್ ನಂತರ) ಎಂದು ವಿಂಗಡಿಸಲಾಯಿತು. ಅಂದಿನಿಂದಲೂ ಪ್ಲುಟೊ ಬಗ್ಗೆ ಚರ್ಚೆಗಳು, ಮರು ವರ್ಗೀಕರಿಸುವ ವಾದ-ವಿವಾದ ನಡೆಯುತ್ತಲೇ ಬರುತ್ತಿದೆ.

ಈ ನಿಟ್ಟಿನಲ್ಲಿ ಸಂಶೋಧನೆಗಳು ನಡೆಯುತ್ತಿವೆ. ಏನೇ ಇರಲಿ ಈ ಗ್ರಹದ ಕುರಿತು ಮಾನವನ ತಿಳುವಳಿಕೆಯ ಜ್ಞಾನ ದಿನವೂ ವಿಸ್ತರಿಸುತ್ತಿರುವುದು ವಿಶೇಷ.

### ಪ್ರಸ್ತುತ ಐದು ಕುಬ್ಜ ಗ್ರಹಗಳಿವೆ

**ಅಧಿಕೃತವಾಗಿ ಗುರುತಿಸಿರುವ ಐದು ಕುಬ್ಜ ಗ್ರಹಗಳೆಂದರೇ ಪ್ಲುಟೊ, ಸೆರೆಸ್, ಎರಿಸ್, ಹೌಮಿಯಾ ಮತ್ತು ಮೇಕ್ಮೇಕ್. ಆದಾಗ್ಯೂ, ತಾತ್ಕಾಲಿಕವಾಗಿ 2007 LS10 ಎಂದು ಗೊತ್ತುಪಡಿಸಿದ ಆರನೇ ಕುಬ್ಜ ಗ್ರಹದ ಸೇರಿದಂತೆ ಇತರ ಅನೇಕ ಕುಬ್ಜ ಗ್ರಹ ಎನಿಸಿಕೊಳ್ಳುವ ಆಕಾಶಕಾಯಗಳಿವೆ.**

ಇತ್ತೀಚಿಗೆ ಸುದ್ದಿಯಲ್ಲಿದ್ದ ಮಹದಾಯಿ ನದಿಯು ಯಾವ ಜಿಲ್ಲೆಯಲ್ಲಿ ಹುಟ್ಟುತ್ತದೆ?

a) ಬೆಳಗಾವಿ
b) ಬಳ್ಳಾರಿ
c) ಮೈಸೂರು
d) ಬೆಂಗಳೂರು

ಉತ್ತರ: A

# ಮಹದಾಯಿ ವಿವಾದ



ಮಹದಾಯಿ ಜಲವಿವಾದ ಕುರಿತು ಇನ್ನಷ್ಟು ವರದಿ ಸಲ್ಲಿಸಬೇಕಾಗಿದ್ದು, ಈ ಸಂಬಂಧ ಮಹದಾಯಿ ನ್ಯಾಯಮಂಡಳಿಗೆ 6 ತಿಂಗಳವರೆಗೆ ಅವಧಿಯನ್ನು ವಿಸ್ತರಿಸಲಾಗಿದೆ. ಈ ಅವಧಿಯು ಆ.20ರಿಂದಲೇ ಅನ್ವಯವಾಗಲಿದೆ. ಮಂಡಳಿ ಇನ್ನೂ ಹೆಚ್ಚಿನ ವರದಿ ನೀಡಲು ಕಾಲಾವಕಾಶ ಕೋರಿ ಜಲಶಕ್ತಿ ಸಚಿವಾಲಯಕ್ಕೆ ಮನವಿ ಮಾಡಿತ್ತು. ಈ ಹಿನ್ನೆಲೆಯಲ್ಲಿ ಸಚಿವಾಲಯ ಅವಧಿಯನ್ನು ವಿಸ್ತರಿಸಿ ಅಧಿಸೂಚನೆ ಪ್ರಕಟಿಸಿದೆ. ಮಹದಾಯಿ ಯೋಜನೆಯ ಕುರಿತಾದ ಮಾಹಿತಿ ಇಲ್ಲಿದೆ.

**ನದಿ ಎಲ್ಲಿದೆ?:** ಮಹದಾಯಿ ನದಿ ಹುಟ್ಟುವುದು ಕರ್ನಾಟಕದ ಬೆಳಗಾವಿ ಜಿಲ್ಲೆ ಖಾನಾಪುರ ತಾಲೂಕಿನ ಜಾಂಬೋಟಿಯಲ್ಲಿ. ಕನ್ನಡಿಗರು ಇದನ್ನು ಮಹದಾಯಿ ಎಂದರೆ, ಗೋವಾದಲ್ಲಿ ಮಾಂಡೋವಿ ಎನ್ನುತ್ತಾರೆ. ರಾಜ್ಯದಲ್ಲಿ ಹುಟ್ಟಿದರೂ ಗೋವಾದಲ್ಲಿ ಹೆಚ್ಚು ಹರಿಯುವುದರಿಂದ ಇದು ಗೋವಾದ ಜೀವನದಿಯಾಗಿದೆ.




**ವಿವಾದ ಏನು?:** ಕರ್ನಾಟಕ, ಗೋವಾ, ಮಹಾರಾಷ್ಟ್ರಗಳಲ್ಲಿ ವ್ಯಾಪಿಸಿರುವ ಮಹದಾಯಿಯ 200 ಟಿಎಂಸಿ ಅಡಿಯಷ್ಟು ನೀರು ವ್ಯರ್ಥವಾಗಿ ಅರಬ್ಬಿ ಸಮುದ್ರ ಸೇರುತ್ತಿದೆ. ಹೀಗಾಗಿ, ಮಹದಾಯಿ ನದಿಯ ಒಂದಿಷ್ಟು ನೀರು ಮಲಪ್ರಭಾ ನದಿಗೆ ಸೇರುವಂತೆ ಮಾಡಿದರೆ ಹುಬ್ಬಳ್ಳಿ-ಧಾರವಾಡ ಜನತೆಯ ಕುಡಿಯುವ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರ ಕಲ್ಪಿಸಬಹುದೆಂದು ಕರ್ನಾಟಕ ಉದ್ದೇಶಿಸಿದೆ. ಮಹದಾಯಿಯಿಂದ ಮಲಪ್ರಭಾಗೆ ನೀರು ಹರಿಸುವ ಯೋಜನೆಯೇ 'ಕಳಸಾ ಮತ್ತು ಬಂಡೂರಿ ನಾಲಾ ಯೋಜನೆ'ಯಾಗಿದೆ. ಮಹದಾಯಿ-ಮಲಪ್ರಭಾ ನದಿಗಳ ನಡುವೆ ಹರಿಯುವ ಉಪ ನದಿಗಳೇ ಕಳಸಾ ಮತ್ತು ಬಂಡೂರಿಗಳಾಗಿವೆ. ಈ ಯೋಜನೆ ಜಾರಿಯಾದರೆ ರಾಜ್ಯದ ಬೆಳಗಾವಿ ಜಿಲ್ಲೆಯ ಸವದತ್ತಿ, ರಾಮದುರ್ಗ ತಾಲೂಕು ಮತ್ತು ಗದಗ ಜಿಲ್ಲೆಯ ಅನೇಕ ಪ್ರದೇಶಗಳಿಗೆ ನೀರು ಹರಿಸಬಹುದು. 1978ರಲ್ಲೇ ಸಿದ್ಧಗೊಂಡ ಈ ಯೋಜನೆಗೆ 2002ರಲ್ಲಿ ಕೇಂದ್ರದ ಅನುಮತಿ ಸಿಕ್ಕಿದೆ. ಆದರೆ, ಇದಕ್ಕೆ ಗೋವಾ ತಗಾದೆಯಿಂದ ನೆನೆಗುದಿಗೆ ಬಿದ್ದಿದೆ.

**ಗೋವಾದ ತಗಾದೆ ಏನು?:** ಕರ್ನಾಟಕ ಸರಕಾರ ಕುಡಿಯುವ ನೀರಿನ ನೆಪದಲ್ಲಿ ನೀರಾವರಿ ಯೋಜನೆಯ ಹುನ್ನಾರ ನಡೆಸಿದೆ. ಮಹದಾಯಿ ನದಿ ನೀರಲ್ಲಿ ಕರ್ನಾಟಕಕ್ಕೆ 44.15 ಟಿಎಂಸಿ ಅಡಿ, ಗೋವಾ 147 ಟಿಎಂಸಿ ಅಡಿ, ಮಹಾರಾಷ್ಟ್ರ 7.57 ಟಿಎಂಸಿ ಅಡಿ ಪಾಲು ಹೊಂದಿವೆ. ಕೇಂದ್ರ ಜಲ ಆಯೋಗದ ಪ್ರಕಾರ, ನಮ್ಮ ವ್ಯಾಪ್ತಿಯಲ್ಲಿ ಬರುವ 1.5 ಟಿಎಂಸಿ ಅಡಿ ನೀರನ್ನು ಕುಡಿಯಲು ಮತ್ತು ಕೈಗಾರಿಕೆಗೆ ಬಳಸಲು ಕರ್ನಾಟಕಕ್ಕೆ ಸಂಪೂರ್ಣ ಹಕ್ಕಿದೆ. ಆದರೆ ಗೋವಾ ಹುಬ್ಬಳ್ಳಿ-ಧಾರವಾಡ ಜನರಿಗೆ ಕುಡಿವ ನೀರಿನ ಸಮಸ್ಯೆ ಇಲ್ಲ. ಇದರ ಹೆಸರಲ್ಲಿ ಲಕ್ಷಾಂತರ ಹೆಕ್ಟೇರ್ ಪ್ರದೇಶಗಳಿಗೆ ನೀರುಣಿಸುವ ಯೋಜನೆ ಕರ್ನಾಟಕದ್ದಾಗಿದೆ ಎಂದು ಆರೋಪಿಸಿದೆ.

**ಕರ್ನಾಟಕದ ನಿಲುವೇನು?:** ಕರ್ನಾಟಕ ತನ್ನ ಪಾಲಿನ 44.15 ಟಿಎಂಸಿ ಅಡಿ ನೀರಿನಲ್ಲಿ ಕಳಸಾ ಯೋಜನೆಗೆ 7.56 ಟಿಎಂಸಿ ಬಳಸಲು ಇಚ್ಛಿಸಿದೆ. ಈಗಾಗಲೇ ಕಣಕುಂಬಿ ಬಳಿ ಕಳಸಾ ಯೋಜನಾ ವಿಭಾಗ ಕಾಮಗಾರಿಗೆ 198 ಕೋಟಿ ರೂ. ಹಣ ಖರ್ಚು ಮಾಡಿದೆ. 5.15 ಕಿ.ಮೀ. ಕಾಮಗಾರಿ ಪೂರ್ಣಗೊಳಿಸಿದ್ದು ಇನ್ನು 120 ಮೀಟರ್ ಮಾತ್ರ ಬಾಕಿ ಉಳಿಸಿಕೊಂಡಿದೆ. 2000ರಲ್ಲಿ ಆರಂಭವಾದ ಈ ಯೋಜನೆ ಗೋವಾ ಸರಕಾರದ ಆಕ್ಷೇಪದಿಂದ ಕುಂಟುತ್ತಾ ಸಾಗಿದೆ.

### ನ್ಯಾಯಾಧಿಕರಣ ರಚನೆ

ಮಹದಾಯಿ ವಿವಾದ ಬಗೆಹರಿಸಲು ಅಂತರ್ ರಾಜ್ಯ ನದಿ ನೀರು ವಿವಾದ ಕಾಯಿದೆ 1956ರ ಸೆಕ್ಷನ್ 4ರ ಅನ್ವಯ 2010ರ ನವೆಂಬರ್‌ನಲ್ಲಿ ಮಹದಾಯಿ ನ್ಯಾಯಮಂಡಳಿ ರಚಿಸಲಾಗಿದೆ. ಈ ಮಧ್ಯೆ ಕೇಂದ್ರ ಸರಕಾರ 2020ರ ಫೆಬ್ರವರಿ 27ರಂದು ಮಹದಾಯಿ ನದಿಯಿಂದ 13.42 ಟಿಎಂಸಿ ಅಡಿ ನೀರು ಬಳಸಲು ಕರ್ನಾಟಕ ರಾಜ್ಯಕ್ಕೆ ಅನುಮತಿಸಿದೆ. ಇದರಲ್ಲಿ 8 ಟಿಎಂಸಿ ಅಡಿ ವಿದ್ಯುತ್ ಉತ್ಪಾದಿಸಲು ಬಳಸಬಹುದು ಎಂದು ಅಧಿಸೂಚನೆಯಲ್ಲಿ ತಿಳಿಸಿದೆ. ನೀರು ಹಂಚಿಕೆಯಲ್ಲಿ ರಾಜ್ಯಕ್ಕೆ ಅನ್ಯಾಯವಾಗಿದೆ ಎಂದು ಆರೋಪಿಸಿ ಕರ್ನಾಟಕ ಸುಪ್ರೀಂ ಕೋರ್ಟ್ ಮೊರೆ ಹೋಗಿತ್ತು. ಸುಪ್ರೀಂ ಕೋರ್ಟ್ ಆದೇಶದ ಅನುಸಾರ ನ್ಯಾಯಮಂಡಳಿ ಮತ್ತಷ್ಟು ವರದಿ ನೀಡಬೇಕಿದೆ. ಈ ವರದಿ ನೀಡಲು ಆಗಸ್ಟ್ 20ರಿಂದ ಅನ್ವಯವಾಗುವಂತೆ ಆರು ತಿಂಗಳ ಸಮಯವನ್ನು ಜಲಶಕ್ತಿ ಸಚಿವಾಲಯ ವಿಸ್ತರಿಸಿದೆ.

**ಇತ್ತೀಚಿಗೆ ರಾಮ್ಸರ್ ಪಟ್ಟಿಗೆ ಸೇರಿದ ನಂಜರಾಯನ್ ಪಕ್ಷಿಧಾಮ ಯಾವ ರಾಜ್ಯದಲ್ಲಿದೆ?**

a) ಕೇರಳ

b) ತಮಿಳುನಾಡು

c) ಆಂಧ್ರಪ್ರದೇಶ

d) ಕರ್ನಾಟಕ

**ಸರಿಯಾದ ಉತ್ತರ: B**

